# ಕೊಡಗು ಸಂಗಾತಿ

ನವೆಂಬರ್ 1 ರಿಂದ 15ರ ತನಕ, 1999 ಪಾಕ್ಷಿಕ ಪತ್ರಿಕೆ (ಬೊಂತಲ್ 15 ರಿಂದ 30ರ ತನಕ)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R. N. N. 240 | ಸಂಪುಟ : 3 | ಸಂಚಿಕೆ : 21 | ಪುಟಗಳು : 24 | ಬೆಲೆ ರೂ. : 5-00


ಶ್ರೀ ಯಂ. ಯಂ ನಾಣಯ್ಯ,
ಎಂ.ಎಲ್.ಎ.





ಶ್ರೀ ಮತಿ ಸುಮಾ ವಸಂತ್
ಎಂ.ಎಲ್.ಎ.



ಶ್ರೀ ಧನಂಜಯ ಕುಮಾರ್
ಎಂ.ಪಿ.

ಶ್ರೀ ಟಿ. ಜಾನ್
ಎಂ.ಎಲ್.ಸಿ.





ಶ್ರೀ ಅಪ್ಪಚ್ಚು ರಂಜನ್
ಎಂ.ಎಲ್.ಎ.



1999ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯ ವಿಜೇತರು ಮತ್ತು ಮಂತ್ರಿ ಪದವಿ ಗಿಟ್ಟಿಸಿಕೊಂಡವರು

[ಲೇಖನ ಒಳಪುಟಗಳಲ್ಲಿ]

## ಕೊಡಗಿನ ಜನತೆಗೆ ಮತ್ತು ಸಂಗಾತಿ ಓದುಗರಿಗೆಲ್ಲರಿಗೂ ದೀಪಾವಳಿ ಹಬ್ಬದ ಶುಭಾಶಯಗಳು

## ಹಾರ್ದಿಕ ಅಭಿನಂದನೆಗಳು



ಯಂ. ಯಂ. ನಾಣಯ್ಯ

ಮಡಿಕೇರಿ ತಾಲೂಕಿನಲ್ಲಿ 2ನೇ ಬಾರಿಗೆ ಶಾಸಕರಾಗಿ ಕರ್ನಾಟಕ ರಾಜ್ಯದ ಅಬಕಾರಿ ಮಂತ್ರಿಯಾದ ಕಾಂಗ್ರೆಸ್ಸಿನ ಮುಂಡಂಡ ನಾಣಯ್ಯನವರು ಉತ್ತಮ ಆಡಳಿತ ತೋರಿಸುವಲ್ಲಿ ಯಶಸ್ವಿ ಯಾಗಲೆಂದು ಶುಭ ಹಾರೈಸುವ

ಪಟ್ಟಡ ಮುತ್ತಣ್ಣ ಉಲ್ಲಾಸ,
ಅವಂದೂರು.



---

## ವೀರರ ದಿವ್ಯಾತ್ಮಕ್ಕೆ ಚಿರಶಾಂತಿ ಸಿಗಲಿ

ಕೊಡಗು ಕೆನರಾ ಬಂಡಾಯ, ರೈತ ದಂಗೆಯ ವೀರ ಸೇನಾನಿ ಸುಬೇದಾರ್ ಗುಡ್ಡೇಮನೆ ಅಪ್ಪಯ್ಯ ಗೌಡರು ಮತ್ತವರ ಸಹಚರರು ದೇಶ ಮತ್ತು ವಿದೇಶಿಗಳ ಕುತಂತ್ರಕ್ಕೆ ದಿನಾಂಕ 31-10-1837 ರಲ್ಲಿ ಬಲಿಯಾಗಿ ಇಂದಿಗೆ ಸರಿಯಾಗಿ 162 ವರ್ಷಗಳೇ ಸಂದವು. ಅಪ್ಪಯ್ಯಗೌಡರ ಮತ್ತವರ ಸಹಚರರ ದಿವ್ಯಾತ್ಮಗಳಿಗೆ ಪರಮಾತ್ಮನು ಚಿರಶಾಂತಿಯನ್ನು ನೀಡಲೆಂದು ಸಂಗಾತಿಯು ಓದುಗರ ಪರವಾಗಿ ಪ್ರಾರ್ಥಿಸುತ್ತದೆ.



ಸಂಪಾದಕಿ

ಕೊಡಗು ಸಂಗಾತಿ ಸಂಸ್ಥೆ, ಮೈಸೂರು

---

## ನವೀಕರಣಗೊಳಿಸಲು ಸಕಾಲ

ಇದೇ ತಿಂಗಳ 6 ಮತ್ತು 7ನೇ ದಿನಾಂಕದಂದು ನಡೆಯಲಿರುವ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಕೈಲು ಮುಹೂರ್ತ ಕಾರ್ಯಕ್ರಮಕ್ಕೆ ಕೊಡಗು ಸಂಗಾತಿಯ ಬಳಗವು ಬರಲಿದೆ. ಇಲ್ಲಿಯ ತನಕ ಪಾಕ್ಷಿಕವನ್ನು ನವೀಕರಿಸದೆ ಇರುವ ಚಂದದಾರರು ಅಂದು ತಪ್ಪದೇ ನವೀಕರಿಸುವುದಲ್ಲದೆ ಹೊಸ ಚಂದದಾರರು ಸಹ ತಮ್ಮ ಹೆಸರನ್ನು ನೊಂದಾಯಿಸಿ ಕೊಳ್ಳಬಹುದಾಗಿದೆ.

ಸಂಪಾದಕಿ

---

## ಮಡಿಕೇರಿಯಲ್ಲಿ ಕೈಲ್ ಮೂರ್ತ ಹಬ್ಬ ಆಚರಣೆ

ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ಮಡಿಕೇರಿ ಇವರ ಆಶ್ರಯದಲ್ಲಿ ಇದೇ ತಿಂಗಳ 6 ಮತ್ತು 7 ರಂದು ಮಡಿಕೇರಿಯಲ್ಲಿರುವ ಕೊಡಗು ಗೌಡ ಸಮಾಜ ಕಲ್ಯಾಣ ಮಂಟಪದ ಕಟ್ಟಡದಲ್ಲಿ ಜನಾಂಗದ ಸಾಂಪ್ರದಾಯಿಕ ಕೈಲು ಮೂರ್ತ ಹಬ್ಬವು ನಡೆಯಲಿರುವುದಾಗಿ ತಿಳಿದು ಬಂದಿದೆ.

ಜನಾಂಗಭಿಮಾನಿಗಳಾದ ಬಾಂಧವರು ಇದನ್ನೇ ಆಹ್ವಾನ ಪತ್ರಿಕೆಯೆಂದು ತಿಳಿದು ತಮ್ಮ ಸಂಸಾರ ಸಮೇತರಾಗಿ ಹೆಚ್ಚಿನ ಸಂಖ್ಯೆಯಲ್ಲಿ ಬಂದು, ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸುವಂತೆ ಅಕಾಡೆಮಿಯ ಅಧ್ಯಕ್ಷರು ಮತ್ತು ಕಾರ್ಯಕಾರಿ ಮಂಡಳಿ ಸದಸ್ಯರು ವಿನಯ ಪೂರ್ವಕವಾಗಿ ಕೋರಿದ್ದಾರೆ.

---

## ನಮ್ಮವುಕೆ "ಸ್ವಯಂ ಉದ್ಯೋಗಾವಕಾಶ"

ನಮ್ಮ ಅರೆಭಾಷೆ ಗೌಡರಲ್ಲಿ ನಿರುದ್ಯೋಗಿ ವಿದ್ಯಾವಂತ ಯುವಕರ್‌ಗ ಕಮ್ಮಿ ಬಡ್ಜೆಟ್‌ಲಿ ಸ್ವಂತ ಕೈಗಾರಿಕಾ ಕೆಲಸ ಶುರು ಮಾಡಿಕೊಂಬಕೆ ಆಸಕ್ತಿ ಇದ್ದವು ವಿವರಗಳೊಟ್ಟಿಗೆ 'ಕೊಡಗು ಸಂಗಾತಿ' ಮೈಸೂರು ಕಛೇರಿಗೆ ಬರ್ದ್ ಕಣಕ್,

ವಿಳಾಸ : ಬಾಕ್ಸ್ ನಂ. 6 C/o ಕೊಡಗು ಸಂಗಾತಿ
ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್,
ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಜಯಲಕ್ಷ್ಮಿಪುರಂ, ಮೈಸೂರು - 570 012.
**ಫೋನ್ : 0821/516771**

**ಮಡಿಕೇರಿಯಲ್ಲಿ ಸಂಗಾತಿ ಕಛೇರಿ**



**ಸಂಗಾತಿ ಚಿಹ್ನೆ ಮತ್ತು ಪಾಕ್ಷಿಕ ಲಭ್ಯ**
**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 21-16 ಎಲ್. ಐ. ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕೊಡಗು ಸಂಗಾತಿ ಚಿಹ್ನೆ ಲಭ್ಯ**



**ಪಾಂಡ್ಯನ್ ಕ್ಯಾಸೆಟ್ ಅಂಗಡಿ,**
ಖಾಸಗಿ ಬಸ್ ನಿಲ್ದಾಣ, ಮಡಿಕೇರಿ - 571 201
ದೂರವಾಣಿ : 08272/29620

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ - 571 234
ದೂರವಾಣಿ : 08276/73370 (R.)

**ಅಮ್ಮಾಜೀರ ಪೊನ್ನಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು - 04
ದೂರವಾಣಿ - 080/6342822

**ಕಲ್ಲುಮುಟ್ಲು ಬಸಪ್ಪ**
ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್,
ಕೆಂಪೇಗೌಡ ನಗರ, ಬೆಂಗಳೂರು - 19
ದೂರವಾಣಿ - 080/6549669






## ಅರೆಭಾಷಿಕ ವಿಭಾಗ



## ಚಂದಾ ವಿವರ

| | | |
|---|---|---|
| ಜೀವಾವಧಿ ಸದಸ್ಯತನ | - | 2000 ರೂ. |
| ವಾರ್ಷಿಕ ಚಂದಾ | - | 120 ರೂ. |
| ಅರ್ಧ ವಾರ್ಷಿಕ | - | 60 ರೂ. |
| ಬಿಡಿ ಪ್ರತಿ | - | 5 ರೂ. |

# ಸಂಪಾದಕೀಯ : ಭತ್ತದ ಗದ್ದೆಗಳನ್ನು ಕಾಫಿ ತೋಟ ಯಾ ಅಡಿಕೆ ತೋಟಗಳಾಗುತ್ತಿರುವ ಬಗ್ಗೆ

ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ದೇಶದಲ್ಲಿ ಆಹಾರ ಉತ್ಪಾದನೆಯ ಕೊರತೆ ಬೇಕಾದಷ್ಟಿತ್ತು. ಈ ಕೊರತೆಯನ್ನು ಸ್ವಾತಂತ್ರ್ಯ ಸಿಕ್ಕಿದ ನಂತರ ವ್ಯವಸಾಯದ ಬಗ್ಗೆ ತುಂಬಾ ನಿಗಾ ವಹಿಸಿ "ಹೆಚ್ಚು ಬೆಳೆಯಿರಿ" ಆಂದೋಲನದ ಮೂಲಕ ಹಸಿರು ಕ್ರಾಂತಿಯಿಂದ ಆಹಾರವು ನಮ್ಮ ದೇಶದಲ್ಲಿ ಸ್ವಾವಲಂಬಿಗಳಾಗುವಂತೆ ಮಾಡಿತು. ಬ್ರಿಟಿಷ್ ಆಡಳಿತದಲ್ಲಿ ದೇಶದಲ್ಲಿ ಬರಗಾಲ ದೇಶದ ಹಲವು ಕಡೆ ಉದ್ಭವಿಸಿ ಸಹಸ್ರಾರು ಜನ ಹಸಿವಿನಿಂದ ಸತ್ತ ಪರಿಸ್ಥಿತಿ ಎಲ್ಲರಿಗೂ ತಿಳಿದ ವಿಷಯವಾಗಿದೆ.

ಈಗ ನಾವು ಆಹಾರದಲ್ಲಿ ಸ್ವಾಲಂಬಿಗಳಾಗುವುದರ ಜೊತೆಗೆ ಈಗ ವಾಣಿಜ್ಯ ಬೆಳೆಗಳಾದ ಕಾಫಿ, ಅಡಿಕೆ, ಶುಂಠಿ, ಕಬ್ಬು, ಭತ್ತವನ್ನು ಬೆಳೆಸುತ್ತಿದ್ದ ಜಮೀನುಗಳಲ್ಲಿ ಬೆಳೆಸಲು ಪ್ರಾರಂಭಿಸಿದ್ದೇವೆ.

ಈ ರೀತಿಯ ಬದಲಾವಣೆಗಳಿಂದಾಗಿ ಆಹಾರ ಧಾನ್ಯಗಳ ಉತ್ಪಾದನೆ ಕಡಿಮೆಯಾಗಿ ನಮ್ಮ ಆಹಾರವನ್ನು ಪರದೇಶಗಳಿಂದ ಆಮದು ಮಾಡಿಕೊಳ್ಳುವ ಪರಿಸ್ಥಿತಿ ಉಂಟಾಗುವುದರಲ್ಲಿ ಸಂಶಯವೇ ಇಲ್ಲ. ಇದನ್ನು ಜನತೆ ಅರಿಯದಿದ್ದರೆ ಕಷ್ಟ ಬಂದಾಗ ವೆಂಕಟರಮಣನನ್ನು ನೆನಸಿ ಪ್ರಯೋಜನವಿಲ್ಲ. ಇದನ್ನು ಸರ್ಕಾರವೂ ಜನತೆಯು ಯೋಚಿಸಿ, ಇದನ್ನು ತಡೆಕಟ್ಟಲು ಪ್ರಯತ್ನ ಪಡಬೇಕು.

ಭತ್ತವನ್ನು ಬೆಳೆಸುವ ರೈತರಿಗೆ ವಾಣಿಜ್ಯ ಬೆಳೆಗಳಾದ ಕಾಫಿ, ಅಡಿಕೆ, ಕಬ್ಬಿನಷ್ಟು ಲಾಭದಾಯಕ ಬೆಳೆಯಲ್ಲದ್ದರಿಂದ ಈ ರೀತಿಯ ಬದಲಾವಣೆಗೆ ಕಾರಣವಾಗಿರುತ್ತದೆ.

ಆಹಾರ ಬೆಳೆಗಳನ್ನು ಬೆಳೆಯುವುದು ಕಡಿಮೆಯಾದರೆ ಮೇಲೆ ಹೇಳಿದ ಪರಿಸ್ಥಿತಿ ಉಂಟಾಗಿ ಮುಂದಿನ ಪೀಳಿಗೆ ಆಹಾರ ಧಾನ್ಯಗಳ ಕೊರತೆಯಿಂದ ಹಸಿವೆಯಿಂದ ಸಾಯಬೇಕಾಗುವುದನ್ನು ಈಗಿನಿಂದಲೇ ನಿಯಂತ್ರಿಸಬೇಕೆಂದು ಸಂಗಾತಿಯ ಅಭಿಪ್ರಾಯವಾಗಿದೆ.

## ಗೌಡರು ಮತ್ತು ಅರೆಭಾಷೆ

ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲಾ ಕೆಲವು ಕಡೆಗಳಲ್ಲಿ ಗೌಡ ಜನರು ಆಡುವ ಭಾಷೆ ಅರೆಭಾಷೆ ಶುದ್ಧ ಕನ್ನಡವಲ್ಲದಿದ್ದರೂ ಇದು ಅದರೊಂದಿಗೆ ಹೋಲಿಕೆಯನ್ನು ಹೊಂದಿದ್ದು ಕನ್ನಡ ಅರಿತವರಿಗೆ ಸುಲಭ ಸಾಧ್ಯವು ಹೌದು. ಈ ಭಾಷೆಯ ಹುಟ್ಟಿನ ಬಗ್ಗೆ ಜಿಜ್ಞಾಸೆಯಿದ್ದರೂ ಇದೊಂದು ಜನಾಂಗದ ಸಂಸ್ಕೃತಿಯ ಪ್ರತೀಕ ಎಂಬುದರಲ್ಲಿ ಎರಡು ಮಾತಿಲ್ಲ.

ಆದರೆ ಇತ್ತೀಚೆಗೆ 'ಮಮ್ಮಿ ಡ್ಯಾಡಿ' ಸಂಸ್ಕೃತಿಯು ಗೌಡ ಜನಾಂಗಕ್ಕೆ ಅಲ್ಲಲ್ಲಿ ಪ್ರವೇಶವಾದಾಗ ಈ ಅರೆಭಾಷೆಯ ಅಸ್ತಿತ್ವಕ್ಕೆ ತೊಂದರೆಯಾಗುವ ಭಯವಿದೆಯೆಂಬ ಕಠೋರ ಸತ್ಯವನ್ನು ಹೇಳಲೇಬೇಕಾಗಿದೆ. ಮನೆಯಲ್ಲಿ ಅರೆಭಾಷೆ ಮಾತನಾಡುವ ತಂದೆತಾಯಿಯರು ತಮ್ಮ ಮಕ್ಕಳಿಗೆ ಕನ್ನಡವನ್ನೂ, ಇಂಗ್ಲೀಷನ್ನೂ ಅಥವಾ ಇತರ ಭಾಷೆಗಳನ್ನೂ ಕಲಿಸುವುದನ್ನೂ ಕೆಲವೆಡೆ ಕಾಣಬಹುದಾಗಿದೆ. 'ಅಪ್ಪ ಅಮ್ಮನ' ಸ್ಥಾನಗಳನ್ನು 'ಡ್ಯಾಡಿ ಮಮ್ಮಿ'ಗಳು ಆಕ್ರಮಿಸಿಕೊಂಡಿವೆ. ಅಂಥವರು ಅರೆಭಾಷೆ ಆಡುವುದು ಪ್ರತಿಷ್ಟೆಗೆ ಕುಂದು ಎಂದು ತಿಳಿದಂತಿದೆ. ಕೆಲವೊಮ್ಮೆ ಅರೆಭಾಷೆ ಆಡುವ ಗೌಡರೀರ್ವರೂ ಒಟ್ಟು ಸೇರಿದಾಗ ಅವರುಗಳು ಕನ್ನಡವನ್ನೋ ಇತರ ಭಾಷೆಗಳನ್ನೋ ಆಡುವುದು ವಿಪರ್ಯಾಸ. ನಮ್ಮದಾದ ಭಾಷೆಯನ್ನು ಆಡುವುದರಿಂದ ನಮ್ಮ ಬಾಂಧವ್ಯ ಹೆಚ್ಚಾಗುವುದೆಂಬ ಅಂಶ ತಿಳಿಯದಿರುವುದು ತೀರಾ ದುರಾದೃಷ್ಟಕರ.

ಸ್ವತಂತ್ರ ಭಾರತದ ಪ್ರತಿಯೊಬ್ಬ ಪ್ರಜೆಯೂ ತಾನು ಇಚ್ಛಿಸಿದ ಭಾಷೆಯನ್ನು ಆಡುವ ಹಕ್ಕಿದೆಯಾದರೂ, ಯಾವ ಭಾಷೆಯು ತನ್ನ ಹಿರಿಯರಿಂದ ಬಳುವಳಿಯಾಗಿ ಬಂದಿದೆಯೋ, ಸಂಸ್ಕೃತಿಯ ದ್ಯೋತಕವಾಗಿದೆಯೋ ಅದನ್ನಂತೂ ಮರೆಯಬಾರದು. ಎಲ್ಲ ಭಾಷೆಗಳನ್ನು ತಿಳಿದು ಆಡುವುದು ಒಳ್ಳೆಯದಾದರೂ ತನ್ನ ಸ್ವಂತ ಭಾಷೆಯನ್ನು ಕಡೆಗಣಿಸುವುದು ತಾಯಿಯನ್ನು ನಿಂದಿಸಿದಂತೆ. ಆದ್ದರಿಂದ ಅರೆಭಾಷೆ ಆಡುವ ಗೌಡರು ಬೇರೆ ಭಾಷೆಗಳ ಬಗ್ಗೆ ವ್ಯಾಮೋಹ ತೋರದೆ ತಮ್ಮ ಸ್ವಂತ ತಾಯಿ ಭಾಷೆಯ ಬಗ್ಗೆ ಕಾಳಜಿ ವಹಿಸಬೇಕಾಗಿದೆ. ಅದನ್ನಿನ್ನೂ ವ್ಯಾಪಕಗೊಳಿಸಲು ಪಣ ತೊಡಬೇಕಾಗಿದೆ. ಈ ನಿಟ್ಟಿನಲ್ಲಿ ಇತ್ತೀಚೆಗೆ ಗೌಡ ಸಮ್ಮೇಳನ, ಹಬ್ಬಗಳ ಆಚರಣೆ ನಡೆಸುವುದು ಇತರರಿಗೆ ಮಾರ್ಗದರ್ಶನವಾಗಿದೆ ಎನ್ನಬಹುದು. ಹಿಂದೆ ಹಿರಿಯ ಗೌಡರೋರ್ವರು ಅರೆಭಾಷೆ ಆಡುವ ವ್ಯಕ್ತಿ ತನ್ನೊಂದಿಗೆ ಅರೆಭಾಷೆ ಆಡದಿದ್ದರೆ "ನಿಂಗೇನ್ ಅರೆಭಾಷೆ ಬಾದುಲ್ಯಾ? ನೀ ಗೌಡ ಅಲ್ಲನಾ? ಎಂದು ಕೇಳುತ್ತಿದ್ದರಂತೆ. ಇದು ಅವರ ಸ್ವಂತ ಭಾಷೆಯ ಮೇಲಿನ ಅಭಿಮಾನವನ್ನು ತೋರಿಸುತ್ತದೆ. ಹುಟ್ಟಿದ ಮಕ್ಕಳಿಗೆ ಮೊದಲು ತಮ್ಮ ಆಡುಭಾಷೆಯನ್ನು ಕಲಿಸುವುದು ತಂದೆ ತಾಯಿಯರ ಧರ್ಮ ಸಹ ಹೌದು.

ಮೇಲಿನ ಮಾತಿನಲ್ಲಿ ಅರೆಭಾಷೆ ಆಡುವವರು ಪರಭಾಷಾ ದ್ವೇಷಿಗಳಾಗಬೇಕೆಂದೇನೂ ಅಲ್ಲ. ಅನೇಕ ಭಾಷೆಗಳನ್ನು ಕಲಿತು ಆಡುವುದು ಜ್ಞಾನದ ಹೆಬ್ಬಾಗಿಲನ್ನು ಹೊಕ್ಕಂತೆ. ಇಷ್ಟಾದರೂ ಯಾರು ತಮ್ಮ ಸ್ವಂತ ಭಾಷೆಯನ್ನು ತುಳಿದು ನಿಲ್ಲಬಾರದು. ಆದ್ದರಿಂದ ಅರೆಭಾಷೆ ಮಾತನಾಡುವ ಗೌಡರಲ್ಲಿ ಕಿವಿಮಾತೆಂದರೆ ನಾವು ಕಲಿತ, ನಮ್ಮ ಹಿಂದಿನಿಂದ ರೂಢಿಯಿಂದ ಅನುಸರಿಸಿ ಬಂದ ಈ ಭಾಷಾ ಪ್ರವಾಹವನ್ನು ನಮ್ಮ ಮುಂದಿನ ಪೀಳಿಗೆಗೂ ಯಶಸ್ವಿಯಾಗಿ ಸಾಗಿಸುವಲ್ಲಿ ಪ್ರಯತ್ನಿಸೋಣ. ಇಲ್ಲದೆ ಹೋದರೆ ಒಂದು ಕಾಲಕ್ಕೆ ಅರೆಭಾಷೆಯು ಚರಿತ್ರೆಯ ಪುಟ ಸೇರಿ, ಸಂಶೋಧನೆಯ ವಿದ್ಯಾರ್ಥಿಗಳಿಗೆ ವಸ್ತುವಾದೀತು ಜೋಕೆ!?

**ಕಡ್ಲೇರ ಗೀತಾ ಉಲ್ಲಾಸ, ಬೆಟ್ಟಗೇರಿ**

# ಕೊಡಗು ಮತ್ತು ದ. ಕ. ಜಿಲ್ಲಾ ಗೌಡ ಮಹಿಳಾ ಸಂಘ, ಮೈಸೂರು

## ವಿಜೃಂಭಣೆಯ ಕೈಲು ಮುಹೂರ್ತ ಹಾಗೂ ವಾರ್ಷಿಕ ಮಹಾಸಭೆ



ಅತಿಥಿಗಳೊಂದಿಗೆ ಮಹಿಳಾ ಸಂಘದ ಪದಾಧಿಕಾರಿಗಳು

ಎರಡು ವರುಷಗಳನ್ನು ಪೂರ್ಣಗೊಳಿಸಿ ಪುಟ್ಟ ಎಳೆ ಹಸುಳೆ ಮಗುವಾಗಿ ಅಂಬೆಗಾಲಿಡುತ್ತಾ ಪರಿಸ್ಥಿತಿ ಮತ್ತು ಪರಿಸರಗಳ ಪರಿವರ್ತನೆಯ ಪ್ರಭಾವದಿಂದ ಹತ್ತು ಹಲವಾರು ಯೋಜನೆಗಳನ್ನು ಹಾಕಿಕೊಂಡಿದ್ದರು, ಅದನ್ನು ಯಥಾವತ್ತಾಗಿ ಕಾರ್ಯಗತ ಮಾಡಲು ಸಾಧ್ಯವಾಗದೇ ಹೋದರೂ, ಬೆಳೆಯುತ್ತಿರುವ ಈ ಮೈಸೂರು ನಗರದಲ್ಲಿ ಕೊಡಗು ಮತ್ತು ದ. ಕ. ಜಿಲ್ಲಾ ಗೌಡ ಮಹಿಳಾ ಬಾಂಧವರ ಪರಸ್ಪರ ಮಿಲನಕ್ಕೆ ಅವಕಾಶವನ್ನು ಕಲ್ಪಿಸಿ, ಗೌಡರಾದ, "ನಾವೆಲ್ಲ ಒಂದೇ" ಎಂಬ ಮಂತ್ರದಿಂದ ಬೆಳೆಯುತ್ತಿರುವ ಈ ಸಂಘದಿಂದ ಮೊದಲ ಬಾರಿಗೆ ಅದ್ದೂರಿಯ ಕೈಲು ಮುಹೂರ್ತ ಹಬ್ಬ ಹಾಗೂ ವಾರ್ಷಿಕ ಮಹಾಸಭೆಯು ನಡೆಯಿತು.

ದಿನಾಂಕ 10-10-99ರ ಭಾನುವಾರದಂದು 11-00 ಗಂಟೆಗೆ ಕಾರ್ಯಕ್ರಮ ಔಪಚಾರಿಕ ಸ್ವಾಗತದಿಂದ ಪ್ರಾರಂಭವಾಗಿ, ಮಹಿಳೆಯರಿಗೆ, ಮಕ್ಕಳಿಗೆ, ಯುವತಿಯರಿಗಾಗಿ ಆಟೋಟ ಸ್ಪರ್ಧೆಗಳನ್ನು ನಡೆಸಿ, ಮಧ್ಯಾಹ್ನ ಒಂದು ಗಂಟೆಯ ಊಟದ ಬಿಡುವಿನ ನಂತರ ಸಭಾ ಕಾರ್ಯಕ್ರಮ ನಡೆಯಿತು. ಹುದೇರಿ ಹೇಮಾವತಿ ಸೋಮಣ್ಣನವರು ಸಭಾ ವೇದಿಕೆಗೆ ಅತಿಥಿಗಳನ್ನು ಆಹ್ವಾನಿಸಿದರು. ಸಭೆಯ ಅಧ್ಯಕ್ಷತೆಯನ್ನು ಸಂಘದ ಅಧ್ಯಕ್ಷರಾದ ಕುಂಬುಗೌಡನ ಮುತ್ತಮ್ಮ ದೇವಯ್ಯನವರು ವಹಿಸಿದ್ದು, ಮುಖ್ಯ ಅತಿಥಿಗಳಾಗಿ ಕಾನಡ್ಕ ಗಾಯತ್ರಿ ಪದ್ಮಾಜಿ ಹಾಗೂ ಬಲ್ಯಮನೆ ಸಾವಿತ್ರಿ ಶಾಂತಭಾಸ್ಕರ್ ಹಾಗೂ ಕಾರ್ಯದರ್ಶಿನಿ ಗೀತಾ ಮೋಂಟಡ್ಕ ಇವರುಗಳು ವೇದಿಕೆ ಮೇಲೆ ಆಸೀನರಾಗಿದ್ದರು. ಕತ್ರಿಕೊಲ್ಲಿ ಫಿನ್ನಿ ವಸಂತಕುಮಾರ್ ಇವಳು ಪ್ರಾರ್ಥನೆ ಮಾಡಿದರೆ, ಪಟ್ಟಡ ಶೀಲಾಮಣಿ ಪ್ರಭಾಕರ್ ಸ್ವಾಗತಿಸಿದರು. ಕಾರ್ಯದರ್ಶಿ ಗೀತಾ ಮೋಂಟಡ್ಕನವರು ವಾರ್ಷಿಕ ವರದಿಯನ್ನು ಓದಿ, ನೆರಿಯನ ಝಾನ್ಸಿ ನಾಣಯ್ಯ ಲೆಕ್ಕ ಪತ್ರ ಮಂಡಿಸಿದರು. ಅತಿಥಿಗಳಾಗಿ ಮಾತನಾಡಿದ ಕಾನಡ್ಕ ಗಾಯತ್ರಿ ಪದ್ಮಾಜಿ ಹಾಗೂ ಬಲ್ಯಮನೆ ಸಾವಿತ್ರಿ ಶಾಂತಭಾಸ್ಕರ್ ಇವರಿಬ್ಬರು "ಮಹಿಳೆ ವಿದ್ಯಾವಂತಳಾಗುವುದರೆಡೆಗೆ ಮೊದಲು ಹೆಜ್ಜೆ ಇಡಬೇಕು" ಎಂದು ಒತ್ತಿ ಹೇಳಿ ವಿದ್ಯೆಯ ಮಹತ್ವವನ್ನು ತಿಳಿಸಿದರು. ಅಲ್ಲದೆ ನಮ್ಮಲ್ಲಿರುವ ಸಂಣತನ ಬಿಟ್ಟುಯೋಗ್ಯತೆ ಇರುವಂತವರನ್ನು ಪ್ರೋತ್ಸಾಹಿಸಬೇಕೆಂದು ಕರೆ ಇತ್ತರು. ಪ್ರತಿಯೊಂದು ಮಹಿಳೆಗೂ ಒಂದೊಂದು ಕೆಲಸ ಇದ್ದೇ ಇದೆ. ಮಕ್ಕಳನ್ನು ಸಾಕಿ, ಸಲಹಿ ದೊಡ್ಡವರನ್ನಾಗಿ ಮಾಡುವುದು ಕೂಡಾ ಎಲ್ಲದಕ್ಕಿಂತಲೂ ಮಹತ್ತರವಾದಂತಹ ಕೆಲಸವೆ ಅಲ್ಲದೆ ಯಾವ ಮಹಿಳೆಯೂ ತನ್ನನ್ನು ತಾನು ಕುಗ್ಗಿಸಿಕೊಳ್ಳುವುದು ಬೇಡ ಎಂದರು. ಸಭಿಕರ ಪರವಾಗಿ ಸುನಂದ ಯದುಪತಿ ಮಾಣಿಬೆಟ್ಟು ಹಾಗೂ ಕೊಡಲಿಂಗನ ತಿಲಕ ಮೇದಪ್ಪ ತಮ್ಮ ಅನಿಸಿಕೆಗಳನ್ನು ಹಂಚಿಕೊಂಡರು. ಅಧ್ಯಕ್ಷೆ ಕುಂಬುಗೌಡನ ಮುತ್ತಮ್ಮ ದೇವಯ್ಯನವರು ಮಹಿಳಾ ಕಲ್ಯಾಣ ಯೋಜನೆಯಿಂದ ಸಿಗುವಂತಹ ಸವಲತ್ತನ್ನು ಸಭೆಗೆ ತಿಳಿಸಿದರು.

ಇದಾದ ನಂತರ 1999-2000 ಸಾಲಿಗೆ ಹೊಸ ಕಾರ್ಯಕಾರಿ ಸಮಿತಿಯನ್ನು ಅವಿರೋಧವಾಗಿ ಆರಿಸಲಾಯ್ತು. ಅದರಂತೆ ಅಧ್ಯಕ್ಷರಾಗಿ ದಂಬೆಕೋಡಿ ಭಾಗೀರಥಿ, ಉಪಾಧ್ಯಕ್ಷರಾಗಿ ಚೆರಿಯಮನೆ ಶಾರದ ರಾಮಚಂದ್ರ, ಕಾರ್ಯದರ್ಶಿಯಾಗಿ ಗೀತಾ ಮೋಂಟಡ್ಕ, ಸಹ ಕಾರ್ಯದರ್ಶಿ ಕುಯ್ಯುಮುಡಿ ಮೀನ, ಖಜಾಂಚಿಯಾಗಿ ಕೂರನ ಚಂದ್ರಾವತಿ ಹಾಗೂ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಶ್ರೀಮತಿಯರಾದ ಪಟ್ಟಡ ಶೀಲಾಮಣಿ, ಗುಡ್ಡೇಮನೆ ಸುಶೀಲ, ಉಳುವಾರನ ಘನು, ಬಾಳೆಡಿ ಲಕ್ಷ್ಮಿ, ಹುದೇರಿ ಹೇಮಾವತಿ, ನೆರಿಯನ ಝಾನ್ಸಿ, ಕೊಡಲಿಂಗನ ತಿಲಕ ಇವರುಗಳು ಆಯ್ಕೆಯಾದರು. ಇದಾದ ನಂತರ ಸ್ಪರ್ಧೆಯಲ್ಲಿ ಗೆದ್ದವರಿಗೆ ಅತಿಥಿಗಳು ಬಹುಮಾನ ವಿತರಣೆ ಮಾಡಿದರು. ಚೆಟ್ಟಿಮಾಡ ಲಕ್ಷ್ಮೀ ರಘುಪತಿಯವರ ವಂದನಾರ್ಪಣೆಯೊಂದಿಗೆ ಸಾಂಸ್ಕೃತಿಕ ಕಾರ್ಯಕ್ರಮ ನಡೆದು ಕೊನೆಗೆ ಕಾಫಿ ವ್ಯವಸ್ಥೆ ಆಯಿತು. ವಿಶೇಷವಾಗಿ ಸಂಘದ ಸದಸ್ಯರುಗಳೇ ಊಟದ ಒಂದೊಂದು ಬಗೆಯ ತಿಂಡಿತಿನಿಸುಗಳ ಜವಾಬ್ದಾರಿ ವಹಿಸಿದ್ದು, ಬಹಳ ಅಚ್ಚುಕಟ್ಟಾದ ಕಾರ್ಯಕ್ರಮ ನಡೆದು ಸಂಜೆ ಐದು ಗಂಟೆಗೆ ಕಾರ್ಯಕ್ರಮವು ಮುಗಿಯಿತು.

ವರದಿ : ಗೀತಾ ಮೋಂಟಡ್ಕ

ಕೊಡಗು ಸಂಗಾತಿಯಿಂದಾಗಿ ಜನರಲ್ಲಿ ಜಾಗೃತಿ ಮೂಡಿದೆ. ನಮ್ಮತನ ಬೆಳೆದಿದೆ, ಒಗ್ಗಟ್ಟು ಹೆಚ್ಚಿದೆ, ಯುವ ಜನಾಂಗಕ್ಕೆ ಹುರುಪು ಬಂದಿದೆ, ಸಂಸ್ಕೃತಿ ಬಗ್ಗೆ ಅಭಿಮಾನ ಬಂದಿದೆ. ಇದೊಂದು ಶುಭ ಸೂಚನೆ.

ಪೂಜಾರಿ ಮೊಣ್ಣಪ್ಪ.

# ಪತ್ರ ವಿಭಾಗ :

### ಶುಭಹಾರೈಕೆ

ನಮ್ಮ ನಿಮ್ಮೆಲ್ಲರ ಬಹು ಅಚ್ಚು ಮೆಚ್ಚಿನ ಕೊಡಗು ಸಂಗಾತಿ ಒಂದು ಚಿಕ್ಕ ಪಾಕ್ಷಿಕ ಆದರೂ ನೂತನ ಶೈಲಿಯಲ್ಲಿ ಹೊರ ಹೊಮ್ಮುತ್ತಲಿದೆ. ಗೌಡ ಬಾಂಧವರಿಗೆಲ್ಲ ಒಂದು ಹೆಮ್ಮೆ ತರುವಂತಹ ವಿಷಯವಂತು ನಿಜ. ಬರೀ 120 ರೂ. ವಾರ್ಷಿಕ ಚಂದಾ ದರ ಕ್ಲಿಪ್ತ ಸಮಯದಲ್ಲಿ ಅಂಚೆ ಮೂಲಕ ರವಾನಿಸುವುದು ತುಂಬಾ ಕಠಿಣ. 120 ರೂ. ಅಂದರೆ ಅಬ್ಬ! ಎನ್ನುವ ವಿಷಯವೇನು? ಅಲ್ಲ ! ಇಂದಿನ ದಿನದಲ್ಲಿ ಒಪ್ಪೊತ್ತಿನ ಊಟದ ಖರ್ಚು 120 ರೂ. ಎಂದು ವಿದ್ಯಾವಂತರಿಗೆ ತಿಳಿದಂತಹ ಸಂಗತಿ.

ಗೌಡ ಮನೆತನದ ಓರ್ವ ಮಹಿಳೆ ಕಾವೇರಿ ಗರ್ಭದಲ್ಲಿ ಜನಿಸಿ ಇಡೀಯ ಗೌಡ ಬಾಂಧವರ ಪರವಾಗಿ ತನ್ನ ಪತಿಯ ಸಹಾಯದಿಂದ ತನ್ನ ಹಟ, ಛಲದಿಂದ ಈ ಪಾಕ್ಷಿಕವನ್ನು ಉಳಿಸಿ, ಪೋಷಿಸಿ, ಬೆಳೆಸಿಕೊಂಡು ಬಂದಿದ್ದು ನಾವೆಲ್ಲ ಮೆಚ್ಚಬೇಕಾದ ವಿಷಯವಾಗಿದೆ. ಬರೀಯ ತಿನ್ನಲು, ಕುಡಿಯಲು ಮುಂದಾಗದೇ ಸಂಸಾರದಲ್ಲಿ ಕಲಹ, ವೈಮನಸ್ಸು ದೂರ ಮಾಡಿ ಜಾತಿಯ ಬಾಂಧವರ ಬಗ್ಗೆ ಅಭಿಮಾನವಿರುವ ಮಹಿಳೆ ಶೀಲಾಮಣಿ ಮತ್ತು ಪ್ರಭಾಕರರವರ ನಮ್ಮ ನಿಮ್ಮೆಲ್ಲರ ಸಂಗಾತಿಯನ್ನು ಅಳಿದು ಹೋಗದಂತೆ ಬೆಳೆಯಲು ಪ್ರಯತ್ನಿಸುವಿರೊ. ಮತ್ತು ಬೈತಡ್ಕ ಜಾನಕಿ ಬೆಳ್ಯಪ್ಪನವರ ತುಂಬು ಸಹಕಾರ ಸಂಗಾತಿಯ ಬಗ್ಗೆ ದುಡಿಯುವುದೊಂದು ಕಿಂಚಿತ್ ಸೇವೆಯನ್ನು ಓದುಗರೆಲ್ಲ ನೆನಪಿಸಿಕೊಳ್ಳುವರೆ?

ಇನ್ನು ಉಭಯ ಕುಶಲೋಪರಿ, ಕವನ, ಚುಟುಕು ಹೆಚ್ಚಿನ ಸಂಖ್ಯೆಯಲ್ಲಿ ಮೂಡಿ ಬರಲೆಂದು ಹಾರೈಸೋಣವೆ. ನಷ್ಟದಲ್ಲಿಯೂ ಹೊರ ಹೊಮ್ಮುತ್ತಿರುವ ಸಂಗಾತಿ ಶೀಲಾಮಣಿ ಪ್ರಭಾಕರ ಇವರಿಗೆ ಶ್ರೀ ಶ್ರೀ ಕಾವೇರಿ ಮಾತೆಯೂ ಶೃಂಗೇರಿ ಶಾರದಾಂಬೆಯೂ, ಶೃಂಗೇರಿ ಗುರುಗಳ ಅನುಗ್ರಹವೂ, ಮನೆಯ ಆರಾಧ್ಯ ಮೂರ್ತಿಗಳ ಕುಲದೇವತಾ ವೆಂಕಟರಮಣನು ಸದಾ ಸುಖ ಶಾಂತಿ ನೆಮ್ಮದಿ ಆಯುರಾಯುಷ್ಯ ಕೊಟ್ಟು ಕರುಣಿಸಿ ಕಾಪಾಡಲೆಂದು ಗೌಡ ಬಾಂಧವರ ಪರವಾಗಿ ನನ್ನ ಆತ್ಮ ಪೂರ್ವಕ ಬೇಡಿಕೆ.

**ಜೆ. ಸಿ. ಗಿರೀಶ್ ಕುಮಾರ್, ಇಂದಿರಾ**
**ಜ್ಯೋತಿಷ್ಯ ಮತ್ತು ವೈದ್ಯ**
**ಗುತ್ತುಮುಂಡನ ಮನೆ, ಮದೆ ಅಂಚೆ**

### ಆತ್ಮಪೂರ್ವ ಬೇಡಿಕೆ

ನಾನ್ ಒಬ್ಬ ಮಾಜಿ ಸೈನಿಕ ಹಾಗೂ ಕಳ್ದ ಒಂದು ವರ್ಷಂದ ಗೌಡ ಜನಾಂಗದ ಮೆಚ್ಚಿನ ಪಾಕ್ಷಿಕ ಕೊಡಗು ಸಂಗಾತಿಯ ಓದುಗ ಹಾಗೂ ಚಂದದಾರ. ನಂಗೆ ಈ ಪತ್ರಿಕೆಯ ಬಗ್ಗೆ ಹೇಳ್ದೊಕ್ಕಿಂತ ಹೆಚ್ಚಾಗಿ ಇದರ್ನ ಎಲ್ಲ ಕಡೆಂದ ಸಂಗ್ರಹಿಸಿ ಕಷ್ಟಪಟ್ಟು ಪ್ರಕಟಿಸುವ ನಿಮಗೆ ನಾನು Army Salute ಹೊಡ್ದನೇ. ಯಾಕೆತೇಳ್‌ರೇ ಈಗನ ಗೌಡ ಜನಾಂಗತಾ ಅಲ್ಲ ಇಡೀ ಪ್ರಪಂಚನೇ ತಗಂಡ್ರೂಸ ಈಗ ಯಾರಿಗೂ ಟೈಮ್ ಇಲ್ಲೆ. Without work Busy. ನಮ್ಮ ನಾಡ್ ಕಡೆ ಹೋಗಿ ದಾರಿಲೋ, ಸಂತೆಲೋ, ಬಸ್ ಸ್ಟ್ಯಾಂಡಿಲೋ ಯಾರ್ನಾರ್ ಮಾತಾಡ್ಸಿ ನೋಡಿ. "ಹೇ ಬುಡಪ್ಪ, ನಿಂಗೆನೋ ಸುಮಾನ ನನ್ನ ತಾಪತ್ರೆನೇ ತಿರ್‍ದ್ದಲೇ, ಅದರೊಟ್ಟಿಗೆ ಈ ಗೌಡರುಗಳ ಸೇರ್‍ಸೊಕಡ, ಕಥೆ ಬರಿಯೊಕಡಾ. ಇದೆಲ್ಲ ತಲೆ ಬೇನೆ ನಂಗೆ ಬ್ಯಾಡತಾ ಹೇಳುವೆ.

ಅಂತಹ ಜನರೆಡೆಲೀ ನೀವು ನಾನ್ ಕೇಳ್ದಂಗೆ ಇಷ್ಟೊಂದು ಶ್ರಮ ತಗಂಡ್. ಮನೆ ಮನೆಗೇ ತಿರ್‍ಗಿ ತಿಂಗಳಿಗೆ ಸರಿಯಾಗಿ ಎರಡು ಪುಸ್ತಕ ತುಂಬ್ಸಿ ಚಂದದಾರರ ಮನೆಗಳಿಗೆ ತಲ್‌ಪಿಸಿರೆ ನೋಡಿ ಅದೇ ದೊಡ್ಡ ಹೆಗ್ಗಳಿಕೆ.

ಇದೇ ಕೆಲ್ಸ ನೀವು ಕೊಡ್‌ಗ್‌ಲೀ ಇದ್ದ್‌ಕಂಡ್ ಮಾಡಿಕೆ ಆತೀತ್‌ಲೇ. ಮಾಡುವೇತ್ತೇಳ್‌ರೇ ಎಲ್ಲದಕ್ಕಿಂತಾ ಮುಂದು ಅವು ಇಂತಹ ವಿಷಯನಾ ತಲೆಗೆ ಹಾಕಂಬಲೆ. ಹಾಕೀರೂ ಕೂಡ "ಓಹೊ ಇವಂಗೇ ಏನ್ ಬೇರೆ ಕೆಲ್ಸ ಇರ್‍ಕ್ಲೇ ಇಂವ ಗೌಡನ ಉದ್ಧಾರ ಮಾಡ್‌ದೆಗಡತ ನಿಮ್ಮನೇ ಮೂಲೆಗೆ ಮಾಡ್‌ತ್ತಿದ್ದೊ. ನೀವು ಬಂದ ದಾರಿಗೆ ಸುಂಕ ಇಲ್ಲದಂಗೆ ಬರಕಾಯ್ತ್.

ಬೇರೆ ಜನಾಂಗದವರ ಬಗ್ಗೆ ಹೇಳ್ದು ಸರಿಯಿಲ್ಲೆ. ಅದೇ ನಮ್ಮವು ನೋಡಿ ಅಂವ ಗೌಡತಾ ಗೊತ್ತಿದ್ದರು ಸಹ ಅಂವ ದೂರನೇ ಇದ್ದ್ ಬುಡ್‌ಲೀ. ಅವನಾ ನೆಂಟಸ್ಥನವು ಬೇಡ, ಮಾತಾಡ್ಸ್‌ದೂ ಬೇಡತಾ ನೋಡಿ ನೋಡದವರಂಗೇ ಇದ್ದವೇ. ಇಲ್ಲಿ ಮೈಸೂರ್‌ಲಿ ನಮ್ಮ ಜನಾಂಗದವು ದೊಡ್ಡ ದೊಡ್ಡ ಕೆಲ್ಸಲಿ ಒಳೋ. ನಾನ್ ಮಾಜಿ ಸೈನಿಕ ಕೆಲ್ಸಕ್ಕಾಗಿ ಒಂದಿಬ್ಬರ ಹತ್ರ ಹೋಗಿದ್ದೆ. ಅವು ಈ ದೇಶಲಿ ಇಲ್ಲದ ಕಾನೂನು ಎಲ್ಲಾ ಒದ್‌ರ್‌ಕೆ ಸುರು ಮಾಡಿ ಬುಟ್ಟೊ. ಮತ್ತೆ ನಾನ್ ಅತ್ತ ತಿರ್‌ಗಿಸ ನೋಡ್ತ್‌ಲೆ.

**ಕೊಡಲಿಂಗನ ಮೇದಪ್ಪ**
**ವಿಜಯನಗರ, ಮೈಸೂರು.**

### ಗೌಡ ಜನ

ನಮ್ಮ ಜನ ಗೌಡ ಜನ
ಸುಖಕರವಾಗಿರಲಿ ಇವರ ಜೀವನ
ನಮ್ಮ ಪೂರ್ವಜರು ಮಾಡಿರುವರು ದುಷ್ಟರ ದಮನ
ಅವರ ಕೀರ್ತಿ ಮುಟ್ಟಿದೆ ಇಂದು ಗಗನ
ಬಲು ಸುಂದರ ನಮ್ಮ ಜನ ಹೇಳುವ ಮಧುರ ಗಾನ
ಸೆಳೆದಿರುವವರು ಇವರು ಎಲ್ಲರ ಗಮನ
ನಮ್ಮ ಜನ ಗೌಡ ಜನ
ಮುಟ್ಟಲಿ ಅವರ ಮನ ನನ್ನ ಈ ಕವನ

**ತಳೂರು ಸುಧಿ, ಮಡಿಕೇರಿ**

# ನಮ್ಮ ಲೇಖಕರ ಪರಿಚಯ

ಎಂ. ಇ. ಮೊಹಮ್ಮದ್

ಇವು ಮಡಿಕೇರಿಲಿ ವಾಸ ಆಗಿರುವ ಎಂ. ಕೆ. ಇಬ್ರಾಹಿಂ ಮತ್ತೆ ಷರೀಫ್ ದಂಪತಿಗಳ ಮಂಜನಾಗಿ ಹುಟ್ಟಿದೋ. ಈಗ ಭಗವತಿ ನಗರದ ನಿವಾಗಿ ಆಗಿ ಒಳೊ. ಇವು ಏಳನೇ ಕ್ಲಾಸ್‌ವರೆಗೆ ಮಡಿಕೇರಿಲೇ ಓದಿದ್ದ್. ಇವುಕೆ ಮಾತಾಡಿಕೆ ಬರಿಯಕೆ ಕನ್ನಡ, ಮಲಯಾಳಂ, ತಮಿಳು, ತುಳು, ಬ್ಯಾರಿ, ಕೊಡವ ಮತ್ತೆ ಅರೆಭಾಷೆ ಬಂದದೆ.

ಇವು ಪತ್ರಕರ್ತರಾಗೊಳೋ. ಈಗ ಪತ್ರಕರ್ತರಾಗಿ ತಮ್ಮ ಒಂದು ಸ್ವಂತ ಪತ್ರಿಕೆನ ಮಡಿಕೇರಿಂದ ಹೊರಡುಸ್ತವಳೊ. ಇದ್‌ರ ಹೆಸ್ರ್ ಫಿರ್ದೌಸ್ ವಾರ ಪತ್ರಿಕೆ. ಇದ್ ಕರ್ನಾಟಕ ರಾಜ್ಯಲಿ ಮತ್ತೆ ದೇಶದ ಬೇರೆ ಬೇರೆ ಸ್ಥಳಗಳಲ್ಲಿ ಪ್ರಚಾರಲಿ ಉಟ್ಟು. ಸುಮಾರ್ 5000 ಕ್ಕಿಂತ ಹೆಚ್ಚಿಗೆ ಪತ್ರಿಕೆ ಓಡ್ತಾ ಉಟ್ಟು. ಈ ನಿಟ್ಟಲಿ ಇವರ ಸಾಧನೆ ಅಮೋಘತ ಹೇಳಕ್. ಇಷ್ಟ್ ಸಣ್ಣ ವಿದ್ಯೆಲಿ ಅಸ್ಟ್ ದೊಡ್ಡ ಸಂಖ್ಯೆಲಿ ತಾದು ತುಂಬಾ ಕಠಿಣ ತೆಳಕ್ಕ್. ಇದ್ ಅವರ ಉದಾರ ಮನ್ಸ್‌ನ ಶ್ರಮ, ಅನುಭವ, ಶ್ರದ್ಧೆ, ಸ್ವಂತಿಕೆಯ ಭಾವನೆ ಮತ್ತೆ ಜನಾಂಗದ ಅಭಿಮಾನಿತ ಹೇಳಕ್. ಎಲ್ಲಾವುಕೆ ಹಿಂಗೆ ಮಾಡಿಕೆ ಆದುಲೆ. ಕೆಲವೇ ಲೇಖಕ ವ್ಯಕ್ತಿಗಳಲಿ ಅಗ್ರ ಪಂಕ್ತಿಯಲ್ಲಿ ನಿಲ್ಲುವ ವ್ಯಕ್ತಿ ಮಹಮ್ಮದ್ ಆಗೊಳೊ. ಈ ಪತ್ರಿಕೆ ವಾರಕೆ ಎಂಟು ಪುಟಲಿ ಅಂದರೆ ಲಂಕೇಶ್ ಪತ್ರಿಕೆ ಸೈಜ್‌ಲಿ ಬರ್ತಾ ಉಟ್ಟು. ಇದ್ ಇವರ ಸಾಧನೆ. ಇದ್ಕೆ ಇವರ ದೇವತೆ ಅಲ್ಲಾಹು ಮತ್ತೆ ನಮ್ಮ ಕುಲದೇವ್ರು ವೆಂಕಟರಮಣನ ಆಶೀರ್ವಾದ ಇರ್ಲಿತ್ತೇಳಿ ಬೇಡಿಕಂಬೊನೊ. ಕಾರಣ ಅರೆಭಾಷೆ ಲೇಖಕರಾಗಿ ನಮ್ಮ ಜನಾಂಗಕ್ಕೆ ಕರಿಚಿನ್ನದ ಮೂಲಕ ಈಗಾಗಲೇ ಸಾಕಷ್ಟ್ ಪ್ರಸಿದ್ಧಿ ಆಗೋಳೊ. ಇನ್ನ್ ಸ ಅರೆಭಾಷೆಲಿ ಲೇಖನ ಸಾಕಸ್ಟ್ ಹರ್ದ್ ಬರಲಿತೆಳ್ನೊ.

ಭಾಷೆ ಅಲ್ಲದ ಭಾಷೆಲಿ ಬರಿಯಕನ ಬಾಳ ಎಚ್ಚರ ಬೇಕು. ಕರಿಚಿನ್ನ ಇವರ ಪ್ರಥಮ ಪ್ರಯೋಗ. ಆದ್ರೂ ತುಂಬಾ ಲಾಯ್ಕಾಗಿ ಬರ್ತಾ ಇದ್ದ್, ಓದುಗರ ಮನಗೆದ್ದ ಅನುವಾದ ಕಾದಂಬರಿ ಆಗುಟು. ಇವು ಮಲೆಯಾಳಂದ ಅರೆಭಾಷೆಗೆ ಅನುವಾದ ಮಾಡ್‌ಕನ ಕೊಡಗ್‌ನ ಪರಿಸರನ ಗ್ಯಾನ ಮಾಡಿಕಂಡ್ ಅರೆಭಾಷಿಕರ ಪರಿಸರಕ್ಕೆ ತಕ್ಕಂತೆ ಹೊಂದಿಸಿಕಂಡ್ ಕಲ್ಪಿತ ಹೆಸರ್‌ಗಳಿಂದ ಬರ್ದೊಳೋ.

ಮಡಿಕೇರಿಯ ಶಕ್ತಿ ಪತ್ರಿಕೆಲಿ ಒಂಭತ್ತು ವರ್ಷ ಕಾಲ ಉಪಸಂಪಾದಕರಾಗಿ ಕರ್ತವ್ಯ ಮಾಡ್ದ ಅನುಭವ ಇವುಕೆ ಉಟ್ಟು. ಮಲೆಯಾಳಂ ಭಾಷೆಂದ ಒಟ್ಟು ಏಳು ಕಾದಂಬರಿಗಳ್ನ ಅನುವಾದಿಸೊಳೊ. ಅದರಲ್ಲಿ ಕನ್ನಡ ನಾಲ್ಕ್, ಕೊಡವ ಭಾಷೆಗೆ ಎರಡ್ ಅರೆಭಾಷೆಗೆ ಒಂದ್ ಮಾಡಿಯೊಳೊ. ಕರಿಚಿನ್ನ ಅರೆಭಾಷೆಗೆ ಸುರುನ ಅನುವಾದ ಆದ್ದರಿಂದ ಬರಿಯಕನ ಸುರುಸುರುಲಿ ಮುಜುಗರ ಆಗ್ತಾ ಇತ್ತ್‌ಗಡ. ನಂತರ ಎಲ್ಲಾ ಸರಿ ಆತ್‌ತ ಹೇಳ್‌ಕನ ಕೊಡಗು ಸಂಗಾತಿಗೆ ಒಂತರದ ಹೆಮ್ಮೆ. ಇವರ ಕರಿಚಿನ್ನದ ಧಾರವಾಹಿಗೆ ಸಂಗಾತಿಗೆ ಸಾಕಷ್ಟ್ ಪ್ರಶಂಸೆ ಪತ್ರಗ ಬಂದುಟ್ಟು. ಇಂವ ಯಾರ್? ಇವ ನಿಜವಾಗಿ ಮಾಪಿಳ್ಳೆನೋ? ಇಲ್ಲಾ ನಮ್ಮೊವನೊ? ಸುಮ ಸುಮ್ಮನೆ ಅವ್ನ ಹೆಸರ್‌ನ ಹಾಕಂಡದ್ದೊ? ಅವನ ಹೆಸರ್‌ಲಿ ಬರ್ದದ್ದೋ? ತೇಳ್ದಕ್ಕೆ ಉತ್ತರ ನಾವೀಗ ಓದುಗರಿಗೆ ಒಮ್ಮೆಗೆ ಕೊಡ್ತಾ ಒಳೊ.

ಇವರ ಹೆಣ್ಣ್‌ನ ಹೆಸರ್ ಸಾರ ತ. ಇವು ಗೃಹಿಣಿಯಾಗಿ ಮನೆಲೇ ಒಳೋ. ವಿದ್ಯಾವಂತೆಯೂ ಹೌದು. ಇವುಕೆ ಇಬ್ಬರ್ ಮಕ್ಕ. ಮಗ್ಳು ಸಲೀನಾ ಮಡಿಕೇರಿ ಕಾನ್ವೆಂಟ್‌ಲಿ ಒಂಭತ್ತನೇ ಕ್ಲಾಸ್‌ಲಿ ಓದ್ತಾಉಟ್ಟು. ಮಂಜ ಸಲೀಮ್ ಸೈಂಟ್ ಮೈಕಲ್ ಸ್ಕೂಲ್‌ಲಿ ಎಂಟನೇ ಕ್ಲಾಸ್‌ಲಿ ಓದಿದೆ.

ಯಮ್ಮಿ, ನಿಮಿಗೆ ಕೊಡಗು ಸಂಗಾತಿಯು ಮತ್ತೆ ಸಂಗಾತಿಯ ಓದುಗರ, ಹಂಗೆ ಅರೆಭಾಷೆ ಜನಾಂಗದ ಪರವಾಗಿ ಕೊಡಗು ಸಂಗಾತಿ ವಂದಿಸಿದೆ.

ಪಟ್ಟಡ ಪ್ರಭಾಕರ

## ಆದಿ ಶ್ರೀ ಕಾವೇರಿ

ಹರಿಯಲಿ ಹರಿಯಲಿ ನಿನ್ನಯ ತೀರ್ಥ
ಮೆರೆಯಲಿ ಮೆರೆಯಲಿ ನಿನ್ನಯ ಕೀರ್ತಿ
ಹರಸಲಿ ಹರಸಲಿ ನಮ್ಮಯ ಮನವ
ಪೈರೆಂಬುದಿಂದು ವೈರಿಯಾಗಿದೆ
ಕರೆ ಕೊಟ್ಟೆವು ಮೆರಗು ಜೀವನಕೆ
ಸರಿಯಾವದೆಂಬ ಪರಿವಿಲ್ಲೆಮಗೆ
ಹಣದ ಮೊಹಕ್ಕೆ ಹೆಣವಾಗುವೆವು ಮುಂದು
ಗುಣದ ವ್ಯಾಮೋಹ ಗಣನೆಗಿಲ್ಲಿಂದು
ಕಣಕಣದಿ ನೀನಿಂದು ನಡೆಸೆನ್ನ ಮುಂದು
ಹರಿವ ರಭಸ ಮರೆಯಾಗದಿರಲೆಂದು
ಹರಿಹರರು ಹರುಸಲಿ ಕಾವೇರಿಯನೆಂದೂ
ಪರಿಪರಿಯಲಿ ಸ್ತುತಿಸುವೆನು ನಾನೆಂದೂ

ಚೇಂದ್ರಿಮಾಡ ಮುತ್ತಪ್ಪ
ಕುಶಾಲನಗರ

# ಈ ಬಾರಿಯ ಚುನಾವಣೆಯಲ್ಲಿ ಜಯಶೀಲರಾದವರು

## ಧನಂಜಯ ಕುಮಾರ್, ಕೊಡಗು ಮಂಗಳೂರು ಲೋಕಸಭಾ ಕ್ಷೇತ್ರ

ರಾಜ್ಯದ ಇಪ್ಪತ್ತೆಂಟು ಲೋಕಸಭಾ ಕ್ಷೇತ್ರಗಳಲ್ಲಿ ಪ್ರತಿಷ್ಠಿತವೆನಿಸಿದ ಕ್ಷೇತ್ರಗಳಲ್ಲಿ ಒಂದಾದ ಕೊಡಗು ಮಂಗಳೂರು ಲೋಕಸಭಾ ಕ್ಷೇತ್ರದಿಂದ ಬಿಜೆಪಿ ಅಭ್ಯರ್ಥಿ ಕೇಂದ್ರದ ಮಾಜಿ ಸಚಿವ ವಿ. ಧನಂಜಯಕುಮಾರ್ ಅವರು ಜಯಗಳಿಸಿದ್ದು. ಸತತ ನಾಲ್ಕನೇ ಬಾರಿಗೆ ಸಂಸತ್ತನ್ನು ಪ್ರವೇಶಿಸಿ ವಾಜಪೇಯಿ ಸರ್ಕಾರದಲ್ಲಿ ಕೇಂದ್ರ ಸಹಾಯಕ ಅರ್ಥ ಸಚಿವರಾಗಿ ಸ್ಥಾನ ಪಡೆದಿದ್ದಾರೆ.

ತಮ್ಮೊಂದಿಗೆ ಪ್ರಬಲ ಹಣಾಹಣಿ ನಡೆಸಿದ ಕಾಂಗ್ರೆಸ್‌ನ ಮಾಜಿ ಮುಖ್ಯಮಂತ್ರಿ ಎಂ. ವೀರಪ್ಪ ಮೊಯ್ಲಿ ಅವರನ್ನು ೭,೮೧೪ ಮತಗಳ ಅಂತರದಿಂದ ಸೋಲಿಸಿದ್ದಾರೆ. ಧನಂಜಯ ಕುಮಾರ್ ಅವರಿಗೆ ೩,೫೧,೦೪೯ ಮತಗಳು ದೊರಕಿದ್ದರೆ, ಮೊಯ್ಲಿ ಅವರಿಗೆ ೩,೪೩,೨೩೫ ಮತಗಳು ಲಭಿಸಿವೆ. ಜಾತ್ಯತೀತ ಜನತಾದಳದ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದ ಲೋಕೇಶ್ವರಿ ವಿನಯಚಂದ್ರ ಅವರು ೩ನೇ ಸ್ಥಾನಕ್ಕೆ ತಳ್ಳಲ್ಪಟ್ಟಿದ್ದಾರೆ. ಅವರಿಗೆ ೨೦,೯೨೭ ಮತಗಳು ಬಂದಿವೆ.

ಧನಂಜಯಕುಮಾರ್ ಅವರ ವಿರುದ್ಧ ಮಾಜಿ ಕೇಂದ್ರ ಗ್ರಾಮೀಣಾಭಿವೃದ್ಧಿ ಸಚಿವ ಬಿ. ಜನಾರ್ಧನ ಪೂಜಾರಿಯವರನ್ನು ಮೂರು ಬಾರಿ ಕಣಕ್ಕಿಳಿಸಿ ಸೋಲು ಅನುಭವಿಸಿದ್ದ ಕಾಂಗ್ರೆಸ್ ಈ ಬಾರಿ ಮಾಜಿ ಮುಖ್ಯಮಂತ್ರಿ ವೀರಪ್ಪಮೊಯ್ಲಿ ಅವರನ್ನು ಕಣಕ್ಕಿಳಿಸಿ ಮತ್ತೆ ಸೋಲು ಅನುಭವಿಸಿದೆ. ಪೂಜಾರಿ ಧನಂಜಯ ಅವರ ಎದುರು ಸೋಲು ಅನುಭವಿಸಿದ್ದರೂ, ಧನಂಜಯರ ಗೆಲುವಿನ ಅಂತರವನ್ನು ಕುಗ್ಗಿಸುತ್ತಾ ಬಂದಿದ್ದರು.

೧೯೯೧ರಲ್ಲಿ ೩೫,೦೩೫, ಮತಗಳ ಅಂತರವಿದ್ದುದು, ೧೯೯೮ರ ಚುನಾವಣೆಯ ಕಾಲಕ್ಕೆ ೬,೯೦೭ಕ್ಕೆ ಇಳಿದಿತ್ತು. ಇದೀಗ ಮೊಯ್ಲಿ ಎದುರು ಧನಂಜಯಕುಮಾರ್ ಈ ಅಂತರವನ್ನು ಹೆಚ್ಚಿಸಿಕೊಂಡಿದ್ದಾರೆ.

ಧನಂಜಯಕುಮಾರ್ ಅವರು ಮೂಲತಃ ಮಂಗಳೂರು ಜಿಲ್ಲೆಯವರಾಗಿದ್ದು, ಬಿಜೆಪಿಯ ಸಕ್ರಿಯ ಪದಾಧಿಕಾರಿಯಾಗಿ ಜಿಲ್ಲಾಧ್ಯಕ್ಷರಾಗಿ ಸೇವೆ ಸಲ್ಲಿಸಿ, ೧೯೮೯ರಲ್ಲಿ ಪೂಜಾರಿ ವಿರುದ್ಧ ಸ್ಪರ್ಧಿಸಿ ೯೧,೦೯೭ ಮತಗಳ ಅಂತರದಿಂದ ಸೋಲು ಅನುಭವಿಸಿದ್ದರು. ಅನಂತರದ ಚುನಾವಣೆಗಳಿಂದ ಅವರು ಅಜೇಯರಾಗಿಯೇ ಮುಂದುವರಿದಿದ್ದಾರೆ. ಈ ಕ್ಷೇತ್ರದಲ್ಲಿ ತಿರಸ್ಕೃತ ಮತಗಳು ೧೩,೬೨೭.

---

## ಮುಂಡಂಡ ಯಂ. ನಾಣಯ್ಯ, ಮಡಿಕೇರಿ ಕ್ಷೇತ್ರ

ಮಡಿಕೇರಿ ತಾಲೋಕಿನ ಕಾಂಗ್ರೆಸ್ಸಿನ ಎಂ. ನಾಣಯ್ಯನವರು 1999ರ ಸೆಪ್ಟೆಂಬರ್‌ನಲ್ಲಿ ಕರ್ನಾಟಕ ವಿಧಾನ ಸಭೆಗೆ ನಡೆದ ಚುನಾವಣೆಯಲ್ಲಿ ೨೬,೦೧೬ ಮತಗಳಲ್ಲಿ ಜಯಶೀಲರಾದರದು. ಬಿಜೆಪಿ ಬಂಡಾಯ ಅಭ್ಯರ್ಥಿ ವಿಸರ್ಜಿತ ವಿಧಾನಸಭಾ ಶಾಸಕ ದಂಬೆಕೋಡಿ ಮಾದಪ್ಪನವರು ೨೧,೪೦೩ ಮತಗಳನ್ನು ಪಡೆದು ೪,೬೧೩ ಮತಗಳಿಂದ ಪರಾಜಿತಗೊಂಡರು. ಬಿಜೆಪಿ ಪಕ್ಷದ ಕೊಂಬಾರನ ಬೋಪಯ್ಯನವರು ೧೭,೨೮೯ ಮತಗಳನ್ನು, ಪಕ್ಷೇತರ ಅಭ್ಯರ್ಥಿ ಟಿ. ಪಿ. ರಮೇಶ್‌ನವರು ೮,೭೬೯ ಮತಗಳನ್ನು ಜನತಾ ದಳದ ಜಾತ್ಯಾತೀತ ಪಕ್ಷದ ಅಭ್ಯರ್ಥಿ ಫಯಾಜ್ ಅಹಮ್ಮದ್‌ನವರು ೧,೯೭೫ ಮತಗಳನ್ನು ಪಡೆದರು. ಮಡಿಕೇರಿ ತಾಲ್ಲೂಕಿನಲ್ಲಿ ಒಟ್ಟು ೭೫,೩೭೨ ಮತಗಳು ಚಾಲಿಸಲ್ಪಟ್ಟು ಅವುಗಳಲ್ಲಿ ೪,೩೦೦ ಮತಗಳು ತಿರಸ್ಕೃತವಾಗಿದೆ.

ಕರ್ನಾಟಕ ರಾಜ್ಯದಲ್ಲಿ ೧೩೨ ಕಾಂಗ್ರೆಸ್ ಅಭ್ಯರ್ಥಿಗಳು ಆಯ್ಕೆಯಾಗಿ ಮುಖ್ಯಮಂತ್ರಿ ಎಸ್. ಎಂ. ಕೃಷ್ಣರವರ ಸಚಿವ ಸಂಪುಟದಲ್ಲಿ ರಾಜ್ಯ ಸಚಿವರಾಗಿ ಅಬ್ಕಾರಿ ಮಂತ್ರಿಯಾಗಿ ಸ್ಥಾನ ಗಿಟ್ಟಿಸಿದ ಶ್ರೀಯುತರು ಮೂಲತಃ ನಾಪೋಕ್ಲು ಸಮೀಪದ ಬೇತು ಗ್ರಾಮದ ಮುಂಡಂಡ ಕುಟುಂಬಸ್ಥರು. 1967ರಲ್ಲಿ ಬೇತು ಗ್ರಾಮದ ದವಸ ಸಹಕಾರ ಸಂಘದ ಮೂಲಕ ಸಹಕಾರಿ ರಂಗವನ್ನು ಪ್ರವೇಶಿಸಿದ ಇವರು 1968ರಲ್ಲಿ ಕೊಳಕೇರಿ ಗ್ರಾಮ ಪಂಚಾಯಿತಿ ಅಧ್ಯಕ್ಷರಾಗಿ, 1979-82ರ ತನಕ ನಾಪೋಕ್ಲು ವಿ.ಎಸ್.ಎಸ್.ಎನ್. ಅಧ್ಯಕ್ಷರಾಗಿ, 1978-83ರ ತನಕ ಎಂ.ಸಿ.ಪಿ.ಸಿ. ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದರು. ಮಡಿಕೇರಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಅಧ್ಯಕ್ಷರಾಗಿಯೂ ಹಾಗೂ ಹಲವಾರು ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ್ದಾರೆ. 1983ರಲ್ಲಿ ಮಡಿಕೇರಿ ಕ್ಷೇತ್ರದಿಂದ ಕಾಂಗ್ರೆ ಶಾಸಕರಾಗಿ ಕೆಲಸ ಮಾಡಿದ್ದಾರೆ. ನಂತರ ಹಲವು ವರ್ಷಗಳು ರಾಜಕೀಯದಲ್ಲಿ ಅಜ್ಞಾತರಾಗಿ ಮಡಿಕೇರಿಯಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು. ಕಳೆದ ಒಂದು ವರ್ಷದಲ್ಲಿ ಮತ್ತೆ ಸಕ್ರಿಯ ರಾಜಕಾರಣಕ್ಕೆ ಇಳಿದು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷತೆ ಗಾದಿಗೇರಿದ್ದರು. ಕರ್ನಾಟಕ ರಾಜ್ಯದ ಕೃಷ್ಣ ಸಂಪುಟದಲ್ಲಿ ಅಬ್ಕಾರಿ ಮಂತ್ರಿಯಾಗಿ ಸ್ಥಾನ ಪಡೆದಿದ್ದಾರೆ.

ಇವರ ಅಧಿಕಾರ ಅವಧಿಯಲ್ಲಿ ಮಡಿಕೇರಿ ಕ್ಷೇತ್ರವು ಸರ್ವಾಂಗೀಣ ಅಭಿವೃದ್ಧಿಗೆ ನಾಂದಿಯಾಗಲೆಂದು ಶುಭ ಹಾರೈಸೋಣ.

---

## ಸುಮಾವಸಂತ್, ವಿರಾಜಪೇಟೆ ಕ್ಷೇತ್ರ

ವೀರಾಜಪೇಟೆ ಮೀಸಲು ಕ್ಷೇತ್ರದಿಂದ ಸ್ಪರ್ಧಿಸಿದ ಕಾಂಗ್ರೆಸ್ ಅಭ್ಯರ್ಥಿ ಮಾಜಿ ಸಚಿವೆ ಶ್ರೀಮತಿ ಸುಮಾವಸಂತ್ ಜಯ ಪಡೆದಿದ್ದು, ತಮ್ಮ ಸಮೀಪದ ಪ್ರತಿಸ್ಪರ್ಧಿ, ಮಾಜಿ ಶಾಸಕ ಹೆಚ್. ಡಿ. ಬಸವರಾಜ್ ಅವರನ್ನು ೪,೨೮೯ ಮತಗಳ ಅಂತರದಿಂದ ಪರಾಭವಗೊಳಿಸಿದ್ದಾರೆ.

ಸುಮಾವಸಂತ್ ಅವರಿಗೆ ೨೯,೧೩೬ ಮತಗಳು ದೊರಕಿದ್ದರೆ, ಬಿಜೆಪಿಯಿಂದ ಈ ಹಿಂದಿನ ಅವಧಿಯಲ್ಲಿ ಶಾಸಕರಾಗಿದ್ದ ಹೆಚ್. ಡಿ. ಬಸವರಾಜ್ ಅವರಿಗೆ ೨೪,೮೬೭ ಮತಗಳು ಲಭಿಸಿವೆ. ಜನತಾದಳದ (ಜಾ) ಕೆ. ಬಿ. ಶಾಂತಪ್ಪ ಅವರಿಗೆ ೪,೨೭೧, ಬಿಎಸ್‌ಪಿಯ ಜೆ. ಪಿ. ರಾಜು ಅವರಿಗೆ ೫೬೭ ಹಾಗೂ ಪಕ್ಷೇತರ ಜಿ. ಎಸ್. ಪುಷ್ಕರ್ ಅವರಿಗೆ ೬೯೯ ಮತಗಳು ಬಂದಿವೆ.

ಪ್ರಸ್ತುತ ಚುನಾವಣೆಯಲ್ಲಿ ಜಯಶೀಲರಾಗಿರುವ ಸುಮಾವಸಂತ್ ಅವರು, ೧೯೮೪ರಲ್ಲಿ ಎಂ.ಎ. ಪದವಿ ಪಡೆದ ಬಳಿಕ ಸಕ್ರಿಯವಾಗಿ ರಾಜಕೀಯ ಪ್ರವೇಶಿಸದರು. ಆ ವಿಧಾನಸಭಾ ಚುನಾವಣೆಯಲ್ಲಿ ವೀರಾಜಪೇಟೆ ಮೀಸಲು ಕ್ಷೇತ್ರದಿಂದ ಪ್ರಪ್ರಥಮ ಮಹಿಳಾ ಅಭ್ಯರ್ಥಿಯಾಗಿ ಆರಿಸಿ ಬಂದವರು.

ಕಾಂಗ್ರೆಸ್ ಸರಕಾರದಲ್ಲಿ ಎರಡು ಬಾರಿ ಸಣ್ಣ ಕೈಗಾರಿಕೆ ಹಾಗೂ ಹೋಮಿಯೋಪತಿ ವೈದ್ಯಕೀಯ ಖಾತೆ ಸಚಿವರಾಗಿ ಕಾರ್ಯ ನಿರ್ವಹಿಸಿದ್ದ ಅವರು ಕಳೆದ ವಿಧಾನಸಭಾ ಚುನಾವಣೆಯಲ್ಲಿ ಬಿಜೆಪಿಯ ಬಸವರಾಜು ಅವರಿಂದ ೧.೭೮೧ ಮತಗಳಿಂದ ಪರಾಭವಗೊಂಡಿದ್ದರು.

ಈ ಮಧ್ಯೆ ಅವರು ನಕಲಿ ಜಾತಿ ದೃಢೀಕರಣ ಪತ್ರ ಸೃಷ್ಟಿಸಿದ ಆರೋಪಕ್ಕೂ ಗುರಿಯಾಗಿ ಪ್ರಕರಣ ನ್ಯಾಯಲಯದಲ್ಲಿರುವಂತೆಯೇ, ಇವರ ಸ್ಪರ್ಧೆಗೆ ತಡೆಯಾಜ್ಞೆ ತರುವ ಪ್ರಯತ್ನವನ್ನು ವಿಫಲಗೊಳಿಸಿ ಈ ಬಾರಿ ಸ್ಪರ್ಧಿಸಿದ್ದರು

ಈ ಬಾರಿ ಕೃಷ್ಣ ಸಂಪುಟದಲ್ಲಿ ರಾಜ್ಯ ಸಚಿವರಾಗಿ (ಸ್ವತಂತ್ರ ಖಾತೆ) ಯೋಜನೆ, ಸಾಂಸ್ಥಿಕ ಹಣಕಾಸು ಮತ್ತು ಸಂಖ್ಯಾಶಾಸ್ತ್ರದ ಖಾತೆಯನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ.

---

## ಶ್ರೀ ಎಂ. ಪಿ. ಅಪ್ಪಚ್ಚು ರಂಜನ್, ಸೋಮವಾರಪೇಟೆ ಕ್ಷೇತ್ರ

ಸೋಮವಾರ ಪೇಟೆ ತಾಲೂಕಿನಿಂದ ಸತತ ಎರಡನೇ ಬಾರಿಗೆ ಆಯ್ಕೆಯಾದ ಬಿ.ಜೆ.ಪಿ. ಅಭ್ಯರ್ಥಿ. ಪ್ರತಿಬಾರಿಯು ಶಾಸಕರನ್ನು ಬದಲಾಯಿಸುತ್ತಿದ್ದ ಈ ಕ್ಷೇತ್ರವು ಎರಡನೇ ಬಾರಿಗೆ ಶ್ರೀಯುತರನ್ನು ಆರಿಸಿದೆ. ಮಾಜಿ ಸಚಿವರಾದ ಶ್ರೀ ಜೀವಿಜಯರವರು ಪ್ರಬಲ ಪೈಪೋಟಿ ಒಡ್ಡಿದರಾದರು ೩೫೭೩ ಮತಗಳಿಂದ ಪರಾಜಿತರಾದರು. ಅಪ್ಪಚ್ಚುರವರು ೩೫೭೬೮ ಮತಗಳನ್ನು, ಜೀವಿಜಯನವರು ೩೨,೧೯೫ ಮತಗಳನ್ನು, ಕಾಂಗ್ರೆಸ್ಸಿನ ಕೆ. ಪಿ. ಚಂದ್ರಕಲಾ ೨೦,೭೩೦ ಮತಗಳನ್ನು, ಜಾತ್ಯಾತೀತ ಜನತಾದಳದ ಬಿ. ಕೆ. ಚಿಣ್ಣಪ್ಪನವರು ೧೬೭೫ ಮತಗಳನ್ನು, ಬಿ. ಎಸ್. ಪಿಯ ಶ್ರೀಧರ್ ಕಲಿವೀರ್ ೬೦೭ ಮತಗಳನ್ನು ಪಕ್ಷೇತರ ಅಭ್ಯರ್ಥಿ ಜವರಯ್ಯ ೪೪೩ ಮತಗಳನ್ನು, ಡಿಸೋಜಾ ೧೧೧೩ ಮತಗಳನ್ನು ಪಡೆದರು. ಒಟ್ಟು ೯೧,೫೨೯ ಮತಗಳು ಚಲಾಯಿಸಲ್ಪಟ್ಟು ೫೪೬೨ ಮತಗಳು ತಿರಸ್ಕೃತಗೊಂಡವು.

ಕೊಡಗು ಜಿಲ್ಲಾ ಭಾರತೀಯ ಜನತಾ ಪಾರ್ಟಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದವರು. ಕಾಂಗ್ರೆಸ್ಸಿನ ಮಾಜಿ ಸಚಿವ ಎ. ಎಂ. ಬೆಳ್ಯಪ್ಪನವರನ್ನು ಹಿಂದಿನ ಚುನಾವಣೆಯಲ್ಲಿ ಸೋಲಿಸಿದ ಇವರು ಮಂಡೆ ಪಂಡ ಕುಟುಂಬಸ್ಥರು ಹಾಗೂ ಬಿ.ಎ. ಪದವೀಧರರು.

---

## ಟಿ. ಜಾನ್, ಎಂ.ಎಲ್.ಸಿ.

ಮಡಿಕೇರಿ ಕ್ಷೇತ್ರದಿಂದ ವಿಧಾನ ಪರಿಷತ್ತಿನ ಸದಸ್ಯರಾದ ಇವರು ಮಡಿಕೇರಿ ನಿವಾಸಿ. ಶ್ರೀಯುತರು ಕರ್ನಾಟಕ ರಾಜ್ಯ ಸಚಿವ ಸಂಪುಟದಲ್ಲಿ ಮಂತ್ರಿ ಪದವಿ ಪಡೆದ ಅದೃಷ್ಟವಂತರು. ಸೋನಿಯಾರವರ ರಾಜಕೀಯ ವಲಯದಲ್ಲಿ ಪ್ರಭಾವಿ ವ್ಯಕ್ತಿಯಾದ ಇವರು ಕೊಡುಗೈ ದಾನಿಗಳು ಹೌದು. ಸಂಪುಟದಲ್ಲಿ (ರಾಜ್ಯ ಸಚಿವರಾಗಿ) ಮೂಲಭೂತ ಸೌಲಭ್ಯ, ಅಭಿವೃದ್ಧಿ, ನಾಗರೀಕ ವಿಮಾನಯಾನ ಖಾತೆಯನ್ನು ಹೊಂದಿದ್ದಾರೆ. ಶ್ರೀಯುತರ ಅಧಿಕಾರ ಅವಧಿಯಲ್ಲಿ ಕೊಡಗು ಅಭಿವೃದ್ಧಿ ಪಥದತ್ತ ಸಾಗಲಿ ಎಂದು ಹಾರೈಸೋಣ.

---

## ವಿಟ್ಲ ಕ್ಷೇತ್ರದಲ್ಲಿ ಇಬ್ರಾಹಿಂ ಗೆಲುವು

ವಿಟ್ಲ ವಿಧಾನಸಭಾ ಕ್ಷೇತ್ರದಲ್ಲಿ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿದ ಕೊಡಗಿನ ಸುಂಟಿಕೊಪ್ಪದ ಕೆ. ಎಂ. ಇಬ್ರಾಹಿಂ ಅವರು ೨೧೭೫ ಮತಗಳ ಅಂತರದಿಂದ ಬಿಜೆಪಿ ಅಭ್ಯರ್ಥಿಯನ್ನು ಪರಾಭವಗೊಳಿಸಿ ಆಯ್ಕೆಗೊಂಡಿದ್ದಾರೆ. ಇಬ್ರಾಹಿಂ ಅವರಿಗೆ ೫೪,೨೬೮ ಮತ ದೊರಕಿದ್ದು, ಬಿಜೆಪಿಯ ರುಕ್ಮಯ್ಯ ಪೂಜಾರಿ ಅವರಿಗೆ ೫೨,೦೯೩ ಮತ ಲಭ್ಯವಾಗಿದೆ.

ಕೆ. ಎಂ. ಇಬ್ರಾಹಿಂ ಅವರು ತಮ್ಮ ಗೆಲುವಿನ ಬಳಿಕ ಪಕ್ಷದ ಕಾರ್ಯಕರ್ತರು ನನ್ನ ಗೆಲುವಿಗಾಗಿ ಶ್ರಮಿಸಿದ್ದಾರೆ. ಕೊಡಗಿನವನಾಗಿದ್ದರೂ, ವಿಟ್ಲದ ಜನತೆ ನನ್ನನ್ನು ಜಯಶೀಲನನ್ನಾಗಿಸಿದ್ದು, ನಾನು ಅಲ್ಲಿಯೇ ನೆಲಸಿ ಕ್ಷೇತ್ರದ ಅಭಿವೃದ್ಧಿಗೆ ಶ್ರಮಿಸುವೆನೆಂದಿದ್ದಾರೆ. ನನಗೆ ಸಚಿವ ಸ್ಥಾನ ಬೇಕಾಗಿಲ್ಲ. ತಾಲೂಕಿನ ಅಭಿವೃದ್ಧಿಗೆ ಪ್ರಾಮಾಣಿಕವಾಗಿ ಪ್ರಯತ್ನಿಸುತ್ತೇನೆ ಎಂದು ಅಭಿಪ್ರಾಯಪಟ್ಟಿದ್ದಾರೆ.

---

## ಮಂತ್ರಿ ಮಂಡಲದಲ್ಲಿ ಯಾರಿಗೆ ಯಾವ ಖಾತೆ

ಮುಖ್ಯಮಂತ್ರಿ ಎಸ್. ಎಂ. ಕೃಷ್ಣ : ಹಣಕಾಸು, ಇಂಧನ, ಸಂಪುಟ ವ್ಯವಹಾರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ನೀರು ಪೂರೈಕೆ ಮತ್ತು ಒಳಚರಂಡಿ ಮಂಡಲಿ, ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ನಗರ ಮೂಲಭೂತ ಸೌಲಭ್ಯ, ಹಣಕಾಸು ಅಭಿವೃದ್ಧಿ ನಿಗಮ ಮತ್ತು ಮಾಹಿತಿ ತಂತ್ರಜ್ಞಾನ ಬೇಹುಗಾರಿಕೆ ಇಲಾಖೆ.



## ಸಂಪುಟ ದರ್ಜೆ ಸಚಿವರು

| | |
|---|---|
| ಮಲ್ಲಿಕಾರ್ಜುನ ಖರ್ಗೆ | ಗೃಹ |
| ಎಚ್. ಕೆ. ಪಾಟೀಲ್ | ಭಾರಿ ಮತ್ತು ಮಧ್ಯಮ ನೀರಾವರಿ |
| ಎಂ. ವೈ ಘೋರ್ಪಡೆ | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ |
| ಕೆ. ಎಚ್. ರಂಗನಾಥ್ | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ |
| ಮೋಟಮ್ಮ | ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ |
| ಬಿ. ಬಿ. ಚಿಮ್ಮಣಕಟ್ಟಿ | ನಗರಾಭಿವೃದ್ಧಿ |
| ಕಾಗೋಡು ತಿಮ್ಮಪ್ಪ | ಸಮಾಜ ಕಲ್ಯಾಣ |
| ಎಚ್. ವಿಶ್ವನಾಥ್ | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ |
| ಧರ್ಮಸಿಂಗ್ | ಲೋಕೋಪಯೋಗಿ ಇಲಾಖೆ |
| ಎ. ಕೃಷ್ಣಪ್ಪ | ಪಶುಸಂಗೋಪನೆ ಮತ್ತು ಸಕ್ಕರೆ |
| ಸಗೀರ್ ಅಹ್ಮದ್ | ಸಾರಿಗೆ |
| ಆರ್. ರೋಷನ್ ಬೇಗ್ | ಪ್ರವಾಸೋಗ್ಯಮ ಮತ್ತು ಹಜ್ |
| ಕಮರುಲ್ ಇಸ್ಲಾಂ | ವಸತಿ |
| ಎ. ಎಂ. ಹಿಂಡಸಗೇರಿ | ಕಾರ್ಮಿಕ ಮತ್ತು ವಕ್ಫ್ |
| ಆರ್. ವಿ. ದೇಶಪಾಂಡೆ | ಬೃಹತ್ ಮತ್ತು ಮಧ್ಯಮ ಕೈಗಾರಿಕೆ |
| ಡಾ. ಎ. ಬಿ. ಮಲಕರೆಡ್ಡಿ | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| ಕಾಶಪ್ಪನವರ್ | ಸಣ್ಣ ಕೈಗಾರಿಕೆ |
| ಎಚ್. ಸಿ. ಶ್ರೀಕಂಠಯ್ಯ | ಕಂದಾಯ |
| ಡಿ. ಬಿ. ಚಂದ್ರೇಗೌಡ | ಕಾನೂನು ಮತ್ತು ಸಂಸದೀಯ ವ್ಯವಹಾರ |
| ಟಿ. ಬಿ. ಜಯಚಂದ್ರ | ಕೃಷಿ |
| ಡಿ. ಕೆ. ಶಿವಕುಮಾರ್ | ಸಹಕಾರ |
| ವಿ. ಮುನಿಯಪ್ಪ | ಗಣಿ ಮತ್ತು ಭೂ ವಿಜ್ಞಾನ |
| ಎಂ. ಮಹದೇವ್ | ರೇಷ್ಮೆ ಮತ್ತು ಜವಳಿ |
| ಬಿ. ರಮಾನಾಥ ರೈ | ಮೀನುಗಾರಿಕೆ ಮತ್ತು ಬಂದರುಸ ಒಳನಾಡು ಜಲಸಾರಿಗೆ, ಮಲೆನಾಡು ಪ್ರದೇಶ ಅಭಿವೃದ್ಧಿ ಹಾಗೂ ವಿಜ್ಞಾನ ಮತ್ತ ತಂತ್ರಜ್ಞಾನ, ಬಯಲು ಸೀಮೇ ಅಭಿವೃದ್ಧಿ |

## ರಾಜ್ಯ ಸಚಿವರು (ಸ್ವತಂತ್ರ ಖಾತೆ)

| | |
|---|---|
| ಡಾ. ಜಿ. ಪರಮೇಶ್ವರ | ಉನ್ನತ ಶಿಕ್ಷಣ, ವಿಜ್ಞಾನ, ಮತ್ತು ತಂತ್ರಜ್ಞಾನ |
| ಪ್ರೊ. ಬಿ. ಕೆ. ಚಂದ್ರಶೇಖರ | ವಾರ್ತಾ ಮತ್ತು ಪ್ರಚಾರ |
| ಆರ್. ಬಿ. ತಿಮ್ಮಾಪುರ | ಕೃಷಿ ಮಾರುಕಟ್ಟೆ |
| ಎಂ. ಶಿವಣ್ಣ | ಹಣಕಾಸು |
| ಸುಮಾ ವಸಂತ್ | ಯೋಜನೆ, ಸಾಂಖ್ಯಿಕ ಹಣಕಾಸು ಮತ್ತು ಸಂಖ್ಯಾಶಾಸ್ತ್ರ |
| ಕುಮಾರ ಬಂಗಾರಪ್ಪ | ಸಣ್ಣ ನೀರಾವರಿ |
| ಎಸ್. ಎಸ್. ಮಲ್ಲಿಕಾರ್ಜುನ | ಯುವಜನ ಸೇವೆ ಮತ್ತು ಕ್ರೀಡೆ |
| ಡಿ. ಬಿ. ಇನಾಂದಾರ್ | ಆಹಾರ, ನಾಗರಿಕ ಪೂರೈಕೆ ಮತ್ತು ಗ್ರಾಹಕ ವ್ಯವಹಾರ |
| ಬಾಬುರಾವ್ ಚಿಂಚನಸೂರ್ | ಸಣ್ಣ ಉಳಿತಾಯ ಮತ್ತು ಮುಜರಾಯಿ, ಕಾರಾಗೃಹ, ಗೃಹರಕ್ಷಕ ದಳ, ಸಣ್ಣ ಉಳಿತಾಯ ಲಾಟರಿ ವಿಮೆ |
| ರಾಣಿ ಸತೀಶ್ | ಕನ್ನಡ ಮತ್ತು ಸಂಸ್ಕೃತಿ |

## ರಾಜ್ಯ ಸಚಿವರು

| | |
|---|---|
| ಟಿ. ಜಾನ್ | ಮೂಲಭೂತ ಸೌಲಭ್ಯ ಅಭಿವೃದ್ಧಿ, ನಾಗರಿಕ ವಿಮಾನ |
| ಅಲ್ಲಂ ವೀರಭದ್ರಪ್ಪ | ತೋಟಗಾರಿಕೆ |
| ಬಾಬುರಾವ್ ಚವ್ಹಾಣ್ | ಸಮಾಜ ಕಲ್ಯಾಣ |
| ಎಂ. ಎಂ. ನಾಣಯ್ಯ | ಅಬ್ಕಾರಿ |
| ನಫೀಸಾ ಫಜಲ್ | ವೈದ್ಯಕೀಯ ಶಿಕ್ಷಣ |
| ಎಂ. ದಿವಾಕರ ಬಾಬು | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ |
| ಎಂ. ಮಲ್ಲಿಕಾರ್ಜುನ | ನಗರಾಭಿವೃದ್ಧಿ |
| ವೀರಕುಮಾರ್ ಪಾಟೀಲ್ | ಇಂಧನ |

# ಕೊಡಗು ಗೌಡ ವಿದ್ಯಾ ಸಂಘದ ವಿದ್ಯಾರ್ಥಿ ವೇತನ ನಿಧಿಗಳು

## ಕೊಡುಗೈ ಮಹಾದಾನಿಗಳ ಪಟ್ಟಿ

| ಹೆಸರು | ಸ್ಥಾಪನೆ | ಅಸಲು |
|---|---|---|
| ದಿ. ಪಟ್ಟಡ ನೀಲವ್ವ ಮುತ್ತಣ್ಣ | 1977 | 1000-00 |
| ದಿ. ಚೆರಿಯಮನೆ ಕುಶಾಲಪ್ಪ | 1978 | 10101-00 |
| ಕೊಡಗುಗೌಡ ವಿದ್ಯಾ ಸಂಘ | 1979 | 4000-00 |
| ದಿ. ಚೆರಿಯಮನೆ ಬೊಳ್ಳಮ್ಮ ಪೊನ್ನಪ್ಪ | 1982 | 1000-00 |
| ಕೊಡಗುಗೌಡ ವಿದ್ಯಾ ಸಂಘ | 1982 | 1000-00 |
| ಕುದುಪಜೆ ಬೆಳ್ಯಪ್ಪ ಕೃಷ್ಣಪ್ಪ | 1984 | 1000-00 |
| ಕೊಡಗು ಗೌಡ ವಿದ್ಯಾ ಸಂಘ | 1984 | 1000-00 |
| ಕಡ್ಯದ ಬಿದ್ದಪ್ಪ | 1984 | 1000-00 |
| ದಿ. ಚೆರಿಯಮನೆ ಪೊನ್ನಪ್ಪ | 1985 | 1000-00 |
| ದಿ. ಕೋರನ ಪೂಣಚ್ಚ ತಿಲಕ | 1985 | 2000-00 |
| ಕೊಡಗು ಗೌಡ ವಿದ್ಯಾ ಸಂಘ | 1985 | 3000-00 |
| ದಿ. ಬಾರನ ಗೌರಮ್ಮ ಮುದ್ದಪ್ಪ | 1986 | 3000-00 |
| ಕುರುಂಜಿ ವೆಂಕಟ್ರಮಣ ಗೌಡ | 1986 | 1000-00 |
| ತೆಕ್ಕಡೆ ಕಾವೇರಮ್ಮ ಮಂದಣ್ಣ | 1986 | 1000-00 |
| ಕೋಳಿಬೈಲು ಬೆಳ್ಯಪ್ಪ | 1986 | 1000-00 |
| ದಿ. ದೊಡ್ಡಡ್ಕ ದೇವಪ್ಪ | 1986 | 1000-00 |
| ಮೊಟ್ಟೇರ ಸುಬ್ಬಯ್ಯ ಬೋಜಪ್ಪ | 1986 | 1000-00 |
| ದಿ. ಕುಂಬುಗೌಡನ ಮುದ್ದಪ್ಪ | 1986 | 1000-00 |
| ಮೊಟ್ಟೇರ ಯಂ. ಬಸಪ್ಪ | 1987 | 1000-00 |
| ತೋಟಂಬೈಲು ಕೆ. ಚಂಗಪ್ಪ | 1987 | 1000-00 |
| ದಿ. ಗುಡ್ಡೇರ ಗಣಪತಿ ಬೋಜಮ್ಮ | 1987 | 1000-00 |
| ದಿ. ಕುಂಞಾಳಿರ ಮಾದಪ್ಪ | 1988 | 1000-00 |
| ಬೈಮನ ಬೆಳ್ಯಪ್ಪ ಡಲ್ಲೇಶ | 1988 | 1000-00 |
| ದಂಬೆಕೋಡಿ ಅಪ್ಪಚ್ಚ ಚಿಣ್ಣಪ್ಪ | 1988 | 1000-00 |
| ಕುರುಂಜಿ ಜಾನಕಿ ವೆಂಕಟ್ರಮಣ ಗೌಡ | 1988 | 1000-00 |
| ಕೊಲ್ಯದ ಬಿ. ರಾಮಪ್ಪ | 1988 | 1000-00 |
| ಕೊಡಗು ಗೌಡ ವಿದ್ಯಾ ಸಂಘ | 1988 | 2000-00 |
| ಕೋರನ ಉತ್ತಯ್ಯ ಪೂವಮ್ಮ, ವಿಶ್ವನಾಥ | 1988 | 1000-00 |
| ಚೆಟ್ಟಿಮಾಡ ಪಿ. ಕೃಷ್ಣಪ್ಪ | 1988 | 1000-00 |
| ಅಮೆ ಕುಶಾಲಪ್ಪ ಪೊನ್ನಪ್ಪ | 1988 | 1000-00 |
| ಕೂಡಕಂಡಿರ ಅಚ್ಚಪ್ಪ, ಅಕ್ಕಯ್ಯ, ಸೋಮಣ್ಣ | 1989 | 1000-00 |
| ಪೇರಿಯನ ಪೂವಯ್ಯ ಪೂವಮ್ಮ | 1989 | 5005-00 |
| ಹೊಸೂರು ಕರುಂಬಯ್ಯ | 1989 | 1000-00 |
| ಪಾಡಿಚೆಟ್ಟೀರ ಮುತ್ತಣ್ಣ ಕುಂಞಮ್ಮ | 1989 | 1000-00 |
| ತೋಟಂಬೈಲು ಸರೋಜಿನಿ ಚಂಗಪ್ಪ | 1989 | 1000-00 |
| ಕೂಡಕಂಡಿರ ಅಚ್ಚಪ್ಪ ಅಕ್ಕಯ್ಯ, ಗಣಪತಿ | 1989 | 2000-00 |
| ನಡುವಟ್ಟಿರ ಆನಂದ, ಭಾಗೀರಥಿ | 1989 | 1000-00 |

| ಹೆಸರು | ಸ್ಥಾಪನೆ | ಅಸಲು |
|---|---|---|
| ಉಳುವಾರನ ಅಪ್ಪಚ್ಚ, ತಿಮ್ಮಯ್ಯ | 1989 | 1000-00 |
| ಕೊಂಪುಳಿರ ಕಾಳಪ್ಪ, ಆನಂದ | 1989 | 1000-00 |
| ಚೀಯಂಡಿರ ಮುತ್ತಣ್ಣ, ಯಾದವ | 1989 | 1000-00 |
| ಕೊಡಗು ಗೌಡ ವಿದ್ಯಾ ಸಂಘ | 1989 | 2500-00 |
| ಕೋರನ ಉತ್ತಯ್ಯ ಪೂವಮ್ಮ, ಆನಂದ | 1989 | 1000-00 |
| ದಂಬೆಕೋಡಿ ಅಪ್ಪಯ್ಯ, ಅಕ್ಕವ್ವ | 1989 | 1000-00 |
| ದಂಬೆಕೋಡಿ ಅಪ್ಪಯ್ಯ, ಅಕ್ಕವ್ವ | 1989 | 1000-00 |
| ಗೂಡಂಜಿ ಕಾಳಪ್ಪ, ಬೆಳ್ಯಪ್ಪ | 1989 | 1100-00 |
| ಬಳಪದ ಸಿ. ಸೋಮಣ್ಣ | 1989 | 1100-00 |
| ಬೈಮನ ರಾಮಪ್ಪ ಪೊನ್ನಪ್ಪ | 1989 | 1000-00 |
| ತೋಟಂಬೈಲು ಕಾಳಪ್ಪ ಈರಪ್ಪ | 1989 | 1000-00 |
| ಮಂದ್ರೀರ ಸುಬ್ಬಯ್ಯ ದೇವಯ್ಯ | 1989 | 1000-00 |
| ಡಾ. ಕಾನಡ್ಕ ಅಣ್ಣಯ್ಯ ಪದ್ಮಾಜಿ | 1989 | 1000-00 |
| ಪಾಂಡನ ಕಾವೇರಮ್ಮ ಸುಬ್ಬಯ್ಯ | 1990 | 1000-00 |
| ಮಂಡಿರ ದೇವಯ್ಯ ನಾಣಯ್ಯ | 1990 | 2000-00 |
| ಬೇಕಲ್ ಸಣ್ಣಯ್ಯ ಉಗ್ಗಪ್ಪ | 1990 | 1000-00 |
| ಸೂದನ ಪೊನ್ನಪ್ಪ ಸರೋಜಿನಿ | 1990 | 1000-00 |
| ಬೈತಡ್ಕ ಮಾದಪ್ಪ ದೇವಯ್ಯ | 1990 | 1000-00 |
| ಅಮೆ ಕೃಷ್ಣಪ್ಪ ಶಿವರಾಯ್ | 1990 | 1008-00 |
| ಪಾಣತ್ತಲೆ ಪೊನ್ನಪ್ಪ ರಾಮಯ್ಯ | 1990 | 1010-00 |
| ಮೋಂಟಡ್ಕ ಬಾಲಕೃಷ್ಣ ಗೌಡ | 1990 | 1000-00 |
| ಚೌಡ್ಲು ಕೆ. ಕಾಳಪ್ಪ | 1990 | 1000-00 |
| ಬೈತಡ್ಕ ಅಯ್ಯಪ್ಪ ಜೋಯಪ್ಪ | 1990 | 1000-00 |
| ಕೊಡಗು ಗೌಡ ವಿದ್ಯಾ ಸಂಘ | 1990 | 3000-00 |
| ಬೆಳ್ಯನ ಮಾದಪ್ಪ ಬಾಲಕೃಷ್ಣ | 1990 | 1011-00 |
| ದಿ. ತೋಟಂಬೈಲು ಯಂ. ಮಾದಪ್ಪ | 1990 | 5000-00 |
| ಕರ್ಣಯ್ಯನ ಪುಷ್ಪವೇಣಿ, ಅಪ್ಪಾಜಿ | 1990 | 1000-00 |
| ಚೆಟ್ಟಿಮಾಡ ಬಿದ್ದಪ್ಪ ಅಯ್ಯಪ್ಪ, ಶಾರದ | 1990 | 1000-00 |
| ಕೂಡಕಂಡಿ ಅಪ್ಪಾಜಿ ಪೂವಮ್ಮ | 1990 | 1000-00 |
| ದಂಬೆಕೋಡಿ ರಾಮಕ್ಕ ಸುಬ್ರಾಯ | 1991 | 1000-00 |
| ಮಾಡಾವು ಯಸ್. ಮುತ್ತಪ್ಪ | 1991 | 1000-00 |
| ಸೂದನ ಎ. ರಾಘುವಯ್ಯ | 1991 | 1000-00 |
| ಅಮೆ ಕೆ. ಸೋಮಣ್ಣ | 1991 | 1000-00 |
| ಪುಳಕಂಡ್ರ ಮುತ್ತಪ್ಪ | 1991 | 1000-00 |
| ಹೊಸೂರು ಡಿ. ಜೋಯಪ್ಪ | 1991 | 1000-00 |
| ಕೊಡಗು ಗೌಡ ವಿದ್ಯಾ ಸಂಘ | 1991 | 1000-00 |
| ಕೊಡಗು ಗೌಡ ವಿದ್ಯಾ ಸಂಘ | 1991 | 2000-00 |
| ಪೇರಿಯನ ಮುದ್ದಯ್ಯ, ಚಿಣ್ಣಮ್ಮ, ಪೂವಯ್ಯ | 1992 | 5000-00 |
| ಕೂಡಕಂಡಿ ಗಣಪತಿ | 1992 | 1002-00 |
| ಹೊಸೂರು, ಜೆ. ಪೂವಮ್ಮ | 1992 | 1000-00 |

| ಹೆಸರು | ಸ್ಥಾಪನೆ | ಅಸಲು |
|---|---|---|
| ಚಿಂಡಡ್ಕ ವೆಂಕಪ್ಪ | 1992 | 1000-00 |
| ಪರ್ಲಕೋಟಿ ಕುಶಾಲಪ್ಪ, ಸುಬ್ಬಮ್ಮ | 1993 | 1000-00 |
| ಸೂದನ ಅಪ್ಪಯ್ಯ ಹೇಮಾಕುಮಾರ | 1993 | 1000-00 |
| ಕುಂಭಗೌಡನ ಕೆ. ಭೀಮಯ್ಯ | 1993 | 1000-00 |
| ಕೊಡಗು ಗೌಡ ವಿದ್ಯಾ ಸಂಘ | 1993 | 4000-00 |
| ಕೊಡಗು ಗೌಡ ವಿದ್ಯಾ ಸಂಘ | 1993 | 1000-00 |
| ಪೇರಿಯನ ಎಂ. ಪೂವಯ್ಯ | 1993 | 15000-00 |
| ಕೋರನ ಚಂಗಪ್ಪ | 1993 | 1001-00 |
| ಕೊಡಪಾಲು ಡಿ. ಸುಬ್ರಾಯ | 1994 | 1000-00 |
| ಮೊಟ್ಟೇರ ಬೋಪಯ್ಯ ಜಗದೀಶ | 1994 | 1000-00 |
| ಪರಿವಾರನ ಆನಂದ ಅಪ್ಪಾಜಿ | 1994 | 1000-00 |
| ಮೂಟೇರ ಜಿ. ಜಂಗಪ್ಪ, ಜಲಜಾಕ್ಷಿ | 1994 | 1000-00 |
| ತೆಕ್ಕಡೆ ನಾಣಯ್ಯ | 1994 | 1000-00 |
| ಬೆಪ್ಪುರನ ಪಳಂಗಪ್ಪ | 1995 | 1000-00 |
| ಸೂದನ ಅಪ್ಪಯ್ಯ | 1995 | 1000-00 |
| ಬೈತಡ್ಕ ಅಯ್ಯಪ್ಪ ಬೆಳ್ಯಪ್ಪ | 1995 | 1000-00 |
| ಕುಯ್ಯಮುಡಿ ಪೂರ್ಣಯ್ಯ | 1996 | 1000-00 |
| ತುಮ್ತ್ತಜ್ಜೀರ ಯಶೋದ ರಾಮಪ್ಪ | 1996 | 2000-00 |
| ಅಂಬೆಕಲ್ಲು ಕುಶಾಲಪ್ಪ | 1996 | 1000-00 |
| ಕೊಡಗು ಗೌಡ ವಿದ್ಯಾ ಸಂಘ | 1996 | 5500-00 |
| ಕೋಡಿರ ಸೀತಮ್ಮ ಬೋಜಪ್ಪ, ದೇವಮ್ಮ | 1997 | 1000-00 |
| ಪಟ್ಟಡ ದೇವಯ್ಯ, ಚಿಣಪ್ಪ, ಮುತ್ತಪ್ಪ | 1997 | 1000-00 |
| ಕೂಡಕಂಡಿ ಚಿಣಮ್ಮ ಮುತ್ತಣ | 1997 | 1000-00 |
| ಕೋರನ ಸಿ. ವಿಶ್ವನಾಥ | 1997 | 2000-00 |
| ದೊಡ್ಡಡ್ಕ ಬೆಳ್ಯಪ್ಪ ಬಾಲಕೃಷ್ಣ | 1998 | 2000-00 |
| ಮೂಟೇರ ಡಿ. ಗಣಪತಿ | 1999 | 5000-00 |
| ಮುಕ್ಕಾಟಿರ ರಾಮಪ್ಪ, ಪುಷ್ಪಾವತಿ | 1999 | 5000-00 |
| ಕೋಳಿಬೈಲು ಮಾಚಯ್ಯ | 1999 | 5000-00 |
| **31-10-1999ರ ತನಕ ಒಟ್ಟು** | | **1,77,338-00** |

ಸಂಗಾತಿ ಸಂಗ್ರಹ

### ಸಂಖ್ಯೆ - 4 ಸಂಖ್ಯಾ ಸ್ವಾರಸ್ಯಗಳು

ನಾಲ್ಕು ಆಶ್ರಮಗಳು : ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ
ನಾಲ್ಕು ವೇಗಳು : ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ
ನಾಲ್ಕು ದಿಕ್ಕುಗಳು : ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ
ನಾಲ್ಕು ಯುಗಗಳು : ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ
ನಾಲ್ಕು ವರ್ಣಗಳು : ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ
ನಾಲ್ಕು ಅವಸ್ಥೆಗಳು : ಬಾಲ್ಯ, ಯೌವನ, ಕೌಮಾರ್ಯ, ಮುಪ್ಪು
ಚತುರುಪಾಯಗಳು : ಸಾಮ, ದಾನ, ಭೇದ, ದಂಡ

ಪಡಿಕಲ್ ಉಷಾ ಚಿಣ್ಣಪ್ಪ, ಕೈಕೇರಿ ಗ್ರಾಮ

### ಹನಿಗವನ

ಹುಡುಗ, ಹುಡುಗಿಯರು
ಮಾತನಾಡಿಕೊಳ್ಳುತ್ತಿದ್ದರು
ನಾನು ಅವನ ಫ್ಯಾನ್
ಅವಳ ಫ್ಯಾನ್ ಎಂದು,
ಕೂಡಲೇ ಅಲ್ಲಿಗೆ ಬಂದ
ಸೇಲ್ಸ್‌ಮ್ಯಾನ್ ಹೇಳಿದನು
ಕೊಂಡುಕೊಳ್ಳಿ ಇದು ಒಳ್ಳೆಯ ಫ್ಯಾನ್

ಮುಕ್ಕಾಟಿ ರವಿಕುಮಾರ, ಕೆ. ಆರ್. ನಗರ

# ಪರಿಶುದ್ಧ ಗೌಡ ಜನಾಂಗ

ಗೌಡ ಎಂಬ ಪದಕ್ಕೆ ವಿಶ್ಲೇಷಣೆ ಕೊಡುವುದು ಈಗ ಬಹಳ ಕಷ್ಟ. ಗೌಡ ಎಂದರೆ ಯಜಮಾನ, ಮುಖ್ಯಸ್ಥ ಎಂಬ ಅರ್ಥ ಬರುವುದು ನಿಜವಾದರೂ, ಇಂದು ಇತಿಹಾಸವನ್ನು ನಾವು ಹೀಗೇ ನಡೆದಿರಬಹುದೆಂದು ಊಹಿಸಬಹುದೇ ಹೊರತು ಅಷ್ಟು ನಿಖರವಾಗಿ ಹೇಳಲು ಆಗುವುದಿಲ್ಲ. ಬಹುಶಃ ದ್ರಾವಿಡ, ಆರ್ಯರ ಕಾಲದಿಂದಲೂ ಇತಿಹಾಸ ಬರೆದಿಟ್ಟಿದ್ದರೆ ನಿಜಾಂಶದ ಕುರುಹಾದರೂ ಇರುತ್ತಿತ್ತು. ಒಂದು ಜನಾಂಗದ ಮೂಲ ಹುಡುಕುವುದು, ನದೀ ಮೂಲ, ಋಷಿ ಮೂಲ ಹುಡುಕಿದಷ್ಟೇ ಕಷ್ಟ.

ಹಿಂದೆ ಒಂದು ಕಾಲದಲ್ಲಿ ಉತ್ತರ ಭಾರತದ ಹಲವೆಡೆಯಲ್ಲಿ ದ್ರಾವಿಡರು ಬಹಳ ಮುಂದುವರೆದಿದ್ದರು. ಕಾಲಕ್ರಮೇಣ ಅವರಿಗಿಂತಲೂ ಉತ್ತಮ ಆಚಾರ ವಿಚಾರ ಹಾಗೂ ರೂಪವನ್ನು ಹೊಂದಿದ್ದ ಆರ್ಯ ಜನಾಂಗ ಮಧ್ಯ ಏಶಿಯಾದಿಂದ ಭಾರತದ ಕಡೆಗೆ ಬಂದರು. ಹೀಗೆ ಬರಲು ನಾನಾ ಕಾರಣಗಳಿರಬಹುದು. ಅತಿವೃಷ್ಟಿ, ಅನಾವೃಷ್ಟಿಗಳಿಂದಾಗುವ ಬರಗಾಲ, ಮಾರಕ ರೋಗಗಳು, ಭೂಕಂಪ, ಜ್ವಾಲಾಮುಖಿಗಳಂಥ ಭಯಂಕರ ಘಟನೆಗಳಿಂದ ಬದುಕು ದುಸ್ತರವಾದಾಗ ಒಂದು ಕಡೆಯಿಂದ ಇನ್ನೊಂದು ಕಡೆಗೆ (ಸುರಕ್ಷಿತ ಜಾಗಗಳಿಗೆ) ಒಲಸೆ ಹೋಗುವುದು ಸ್ವಾಭಾವಿಕ. ಅಂತೆಯೇ ಆರ್ಯರು ಭಾರತಕ್ಕೆ ಬಂದಾಗ, ಸ್ಥಳೀಯರಾದ ದ್ರಾವಿಡರಿಗೂ ಆರ್ಯರಿಗೂ ಘರ್ಷಣೆ ನಡೆದು ಆರ್ಯರ ಕೈ ಮೇಲಾದ ಕಾರಣ ದ್ರಾವಿಡರು ಭಾರತದ ದಕ್ಷಿಣಕ್ಕೆ ಪ್ರಯಾಣಿಸಿದರು. ಹೊಸ ನೀರು ಬಂದಾಗ ಹಳೆನೀರು ಹೋದಂತೆ, ಕಾಲಾಂತರದಲ್ಲಿ ಹೂಣರು, ಕುಶಾನರು, ಪಾರ್ಷಿಯನ್ನರು ಹೀಗೆ ಮಧ್ಯ ಏಶಿಯಾದ ಕಡೆಯಿಂದ ಒಲಸೆ ಬರುತ್ತಲೆ ಇದ್ದರು. ಆಗ ಈ ಆರ್ಯರು ಕೂಡ ದೇಶದ ದಕ್ಷಿಣದ ಕಡೆ, ಪೂರ್ವ ಪಶ್ಚಿಮದ ಕಡೆ ಸರಿಯತೊಡಗಿದರು. [ಹೀಗೆ ಒಲಸೆ ಬಂದವರಲ್ಲಿ ಮುಸ್ಲಿಂ ಮತ್ತು ಇತ್ತೀಚೆಗಿನ ಕ್ರೈಸ್ತರನ್ನು ಬಿಟ್ಟು ಎಲ್ಲರೂ ಭಾರತೀಯರ ಸಂಸ್ಕೃತಿಯೊಂದಿಗೆ ಬೆರೆತು ಹೋದರು]

ಹಿಂದೆ ಇತಿಹಾಸ ಪ್ರಸಿದ್ಧವಾದ ಗೌಡ ದೇಶವೊಂದು ಮಧ್ಯಪ್ರದೇಶ, ಒರಿಸ್ಸಾ, ಬಂಗಾಳ ಪ್ರಾಂತ್ಯಗಳ ನಡುವೆ ಇತ್ತು. ಕಾಲಾನಂತರ ಇವರು ದೇಶದ ನಾನಾ ಮೂಲೆಗಳಿಗೆ ಚದುರಿ ಹೋದರು. ಅವರಲ್ಲಿ ಒಂದು ಭಾಗ ಕರ್ನಾಟಕದ ಧಾರವಾಡ, ಬಳ್ಳಾರಿ, ಶಿರಸಿ ಮಾರ್ಗವಾಗಿ ಪಶ್ಚಿಮ ಘಟ್ಟದ ಉದ್ದಕ್ಕೂ ಬಂದು ಶೃಂಗೇರಿ ಕಡೆಯಿಂದ ಮುಂದುವರೆದು ಸುಬ್ರಹ್ಮಣ್ಯ, ಸುಳ್ಯ, ಸಂಪಾಜೆ ಹೀಗೆ ಕೊಡಗಿಗೂ ಬಂದಿರಬಹುದು. ಇವರು ಬರುವಾಗ ಹಲವಾರು ಕುರುಹುಗಳನ್ನು ಬಿಟ್ಟು ಮತ್ತೆ ಹಲವು ಕುರುಹುಗಳನ್ನು ಹೊತ್ತು ತಂದರು. ಈ ದಿಶೆಯಲ್ಲಿ ಬರುವ ಜನಾಂಗಗಳ ಭಾಷಾಶೈಲಿ, ಹಲವು ಶಬ್ದಗಳು ತುಂಬಾ ಹೋಲಿಕೆಗಳಿರುವುದೇ ಇವರು ಬಿಟ್ಟು ಬಂದ ಕುರುಹು. ಇವರು ತಮ್ಮೊಂದಿಗೆ ಹೊತ್ತು ತಂದಿರಬಹುದಾದ ಕುರುಹುಗಳು ಬಳ್ಳಾರಿ ಕಾರಿ (ಕಳಸೋಂತೆ) ಅಡಿಗೆಗೆ ಉಪಯೋಗಿಸುವ ಹಲವು ತರಕಾರಿಗಳ ಸಾಮ್ಯ, ನಡೆ, ನುಡಿ, ಹಾವ, ಭಾವ ಎಲ್ಲದರಲ್ಲೂ ಸ್ವಲ್ಪ ಹೋಲಿಕೆ ಕಾಣುವುದು. ಹೆಚ್ಚಾಗಿ ಹವ್ಯಕರು ಮತ್ತು ಕುಂದಾಪುರ ಕಡೆಯ ಜನರು ಆಡುವ ಭಾಷೆ (ಗೌಡ ಸಾರಸ್ವತ ಬ್ರಾಹ್ಮಣರು (ಕೊಂಕಣಿ ಬ್ರಾಹ್ಮಣರು) ಅವರಿಗೂ ನಮಗೂ ಅಷ್ಟು ಹೋಲಿಕೆಗಳಿಲ್ಲ. ಮೇಲಾಗಿ ಭಾಷೆ ಸಾಮ್ಯವಿಲ್ಲ) ಒರಿಸ್ಸಾ ಮತ್ತು ಬಂಗಾಳದೇಶದ ಜನರ ಉಚ್ಚಾರಣೆಯಲ್ಲೂ ಅರೆಭಾಷೆಯ ಉಚ್ಚಾರಣೆಯಲ್ಲೂ ಸ್ವಲ್ಪ ಹೋಲಿಕೆ ಇದೆ. ಉದಾ : ಬಸ್ಸು - ಬೊಸ್ಸು, ಬಸಪ್ಪ - ಬೊಸಪ್ಪ, ಬಂದಿದ್ದೆ-ಬೊಂದಿದ್ದೆ ಸಂಶೋಧನೆ ಮಾಡಿದರೆ ಇಂತಹ ಹಲವಾರು ಸ್ವಾರಸ್ಯಕರ ಹೋಲಿಕೆಗಳು ಕಂಡು ಬರಬಹುದು.

ಇನ್ನು ಕರ್ನಾಟಕ ಎಂಬ ಪದಕ್ಕೆ ಕಪ್ಪು ಮಣ್ಣು ಇರುವ ಸ್ಥಳ ಕರಿನಾಡು ಆಗಿರಬಹುದು. ಕರಿ+ನಾಟ್ = ಕರ್ನಾಟಕ, ಕರ್ನಾಡ್, ಕರುನಾಡು, ಕಪ್ಪುಮಣ್ಣಿನ ನೆಲ ಎಂಬ ಅರ್ಥದೊಂದಿಗೆ ಪದ ಪರಿವರ್ತನೆ ಆಗಿರಬಹುದು. ತಮ್ಮ ಭಾಷೆಯ ಜೊತೆ ಕನ್ನಡ ಮಿಶ್ರವಾದಾಗ ಅರೆ ಕನ್ನಡ ಆಗಿರಬಹುದು. ಅಥವಾ ಆರ್ಯಭಾಷೆ ಎಂದು ಸ್ಥಳೀಯರು ನಮ್ಮವರನ್ನು ಗುರುತಿಸಿದಾಗ ಉಚ್ಚಾರಣಾ ದೋಷದಿಂದ ಅದು ಅರೆಭಾಷೆ ಎಂದು ಪರಿವರ್ತನೆ ಆಗಿರಲೂ ಬಹುದಲ್ಲವೆ?

ಒಲಸೆ ಹೋಗುವುದಕ್ಕೆ ಕೂಡ ಒಕ್ಕಲು ಹೋಗುವುದು ಎಂದು ಹೇಳುತ್ತಾರೆ. ಬಹುಶಃ ಈ ಒಕ್ಕಲು ಗೌಡರು ನಮಗಿಂದಲೂ ಹಿಂದೆ ಸಮಗ್ರ ಗೌಡ ಬಾಂಧವರಿಂದ ಅಗಲಿ ದೂರ ಹೋಗಿರಬಹುದು. ಒಕ್ಕಲು ಹೋದ ಇವರನ್ನು ನಮ್ಮವರು ಒಕ್ಕಲುಗೌಡ ಒಕ್ಕಲಿಗ-ವಕ್ಕಲಿಗ ಎಂದೆಲ್ಲಾ ಕರೆದಿರಬಹುದು. ಹಲವಾರು ಪಂಗಡಗಳ ಗೌಡರು ಮೂಲ ಗೌಡರಲ್ಲಿ ವೃತ್ತಿಯಲ್ಲಿ ಇದ್ದಿರಬಹುದು. ಆದ್ದರಿಂದ ಇವರು ತಮ್ಮ ಕುಲದ ಹೆಸರಿನ ಜೊತೆ ಗೌಡ ಅಥವಾ ಒಕ್ಕಲಿಗ ಎಂದು ಸೇರಿಸಿಕೊಂಡಿರಬಹುದು. ಉದಾ : ದಾಸರು, ಒಕ್ಕಲಿಗರಲ್ಲಿ ಇವರು ದಾಸ ಒಕ್ಕಲಿಗರು, ದಾಸಗೌಡರು ಎಂದು ಹೇಳಿಕೊಳ್ಳುತ್ತಾರೆ. ನಾವೂ ಗಂಗಡಿಕಾರರೂ ಒಂದೇ ಇರಬಹುದು ಎಂಬುದಕ್ಕೆ ಉದಾ : ದಾಸರು ಮನೆ ಮನೆಗೆ ಹೋಗಿ ಶನಿವಾರ ದಿನ ಶಂಖ ಊದಿ ಜಾಗಟೆ ಬಾರಿಸುತ್ತಾರೆ. (ನಮ್ಮಲ್ಲಿ ಈಗ ಕಡಿಮೆ) ಆದರೆ ಗಂಗಡಿಕಾರ ಮನೆಯಲ್ಲಿ ಇಂದಿಗೂ ಇದೇ ಪದ್ಧತಿ ನಡೆಯುತ್ತಿದೆ.

ನಮ್ಮಲ್ಲಿ ಹರಿಸೇವೆ ಮಾಡುವಾಗ ದಾಸರು ಬೇಕೇ ಬೇಕು. ಅದೇ ರೀತಿ ಗಂಗಡಿಕಾರರ ಮನೆಯ ಕಾರ್ಯಗಳು ಕೂಡ ದಾಸರಿಲ್ಲದೆ ನಡೆಯುವುದಿಲ್ಲ. ಶ್ರೀನಿವಾಸನ ಒಕ್ಕಲಿಗರೆಂದು ಹೇಳಿಕೊಳ್ಳುವ ಇವರು ವೆಂಕಟೇಶ್ವರ(ಶ್ರೀನಿವಾಸ) ಮನೆದೇವರಾಗಿರುವ ಗೌಡರಲ್ಲಿ ದಾಸ್ಯ ಮಾಡುತ್ತಿದ್ದ ಇವರಿಗೆ ಮುಂದೆ ದಾಸರೆಂದು ಹೆಸರು ಬಂದಿರಬಹುದು.

ನಮಗೂ ಗಂಗಡಿಕಾರರಿಗೂ ಇರುವ ಇನ್ನೊಂದು ಬಹುಮುಖ್ಯವಾದ ಹೋಲಿಕೆ ಹೆಣ್ಣಿನ "ತಾಳಿ". ಈ ತಾಳಿಯ ರಚನೆಯಲ್ಲಿ ಮುಖ್ಯವಾಗಿ ಎರಡು ವಿಧ ಒಂದು "ಪದ್ಮಾವತಿ ತಾಳಿ" (ನಮ್ಮದು ಮತ್ತು ಗಂಗಡಿಕಾರರದು) ಇನ್ನೊಂದು "ಲಕ್ಷ್ಮಿ

20ನೇ ಪುಟಕ್ಕೆ



ಎಂ. ಎಸ್ ವಿಜಯಕುಮಾರ್

## ಜಿ. ಡಿ. ಸಿ.ಯಲ್ಲಿ ಐದನೇ ರ್‍ಯಾಂಕ್

ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲದವರು ನಡೆಸುವ ಸಹಕಾರ ತರಬೇತಿಯಲ್ಲಿ [G.D.C.] 81ನೇ ತಂಡದ ಪರೀಕ್ಷೆಯಲ್ಲಿ ಭಾಗವಹಿಸಿ ಕರ್ನಾಟಕ ರಾಜ್ಯಕ್ಕೆ ಐದನೇ ರ್‍ಯಾಂಕ್ ಪಡೆದು 1997ರ ಸಾಲಿನಲ್ಲಿ ಉತ್ತೀರ್ಣನಾಗಿರುತ್ತಾನೆ. ಈತನು ಮಕ್ಕಂದೂರು ಗ್ರಾಮದ ಮಳ್ಳನ ಸುಬ್ಬಯ್ಯನವರ ಮಗನಾಗಿರುತ್ತಾನೆ.

## ಅರೆಭಾಷಿಕ ಮಾಜಿ ಸೈನಿಕರ ಸಹಕಾರ ಸಂಘ, ಮೈಸೂರು

(ಭೂ ದಳ, ವಾಯುದಳ, ನೌಕಾದಳ, ಪ್ಯಾರ ಮಿಲಿಟರಿ, ಸಿ.ಆರ್.ಪಿ.ಎಫ್., ಬಿ.ಎಸ್.ಎಫ್., ಸಿ.ಐ.ಎಸ್.ಎಫ್., ಕೋಸ್ಟಲ್ ಗಾರ್ಡ್ಸ್)

ದಿನಾಂಕ 24-10-1999ರಂದು ಈ ಮೇಲ್ಕಂಡ ಸಹಕಾರ ಕೂಟದ ದ್ವಿತೀಯ ಮಾಸಿಕಸಭೆಯು ಮೈಸೂರಿನ ಜಯಲಕ್ಷ್ಮಿ ಪುರಂನಲ್ಲಿರುವ ಕೊಡಗು ಗೌಡ ವಿದ್ಯಾಸಂಘದ ಭವ್ಯ ಕಟ್ಟಡದಲ್ಲಿ ನಡೆಯಿತು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಕುಯ್ಯಮುಡಿ ರಾಮಪ್ಪನವರು ವಹಿಸಿದ್ದರು. ಸಭೆಯು ದೀರ್ಘ ಚರ್ಚೆ ನಡೆಯಿಸಿ ಪ್ರತಿ ತಿಂಗಳ 3ನೇ ಶನಿವಾರ ಸಂಜೆ 5 ಗಂಟೆಗೆ ಖಡ್ಡಾಯವಾಗಿ ಸಭೆ ಸೇರುವಂತೆ ತೀರ್ಮಾನಿಸಿತು. 31-12-1999ರಂದು ಜಿಲ್ಲೆಯ ಗೌಡ ಮಾಜಿ ಸೈನಿಕರು ಈ ಮೇಲಿನ ಕಟ್ಟಡದಲ್ಲಿ ಕಲೆಯುವಂತೆಯು ಮತ್ತು ತಕ್ಕ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವಂತೆಯು ಸಹ ತೀರ್ಮಾನಿಸಲಾಯಿತು. ತಮ್ಮ ಅರಿವಿಗೆ ಬಂದಂತಹ ಸರ್ವ ಮಾಜಿ ಸೈನಿಕರ ಸಹಕಾರವನ್ನು ಈ ಸಂದರ್ಭದಲ್ಲಿ ಸಹ ಕೋರಲಾಯಿತು. ಸಭೆಯಲ್ಲಿ ಬಲ್ಯಮನೆ ಶಾಂತಭಾಸ್ಕರ್, ಮೆರ್‌ಕಜೆ ವಿಶ್ವನಾಥ ಮತ್ತು ಪಟ್ಟಡ ಪ್ರಭಾಕರ್ ಸಭೆಯನ್ನು ಉದ್ದೇಶಿಸಿ ಮಾತನಾಡಿದರು. ಕೊನೆಯದಾಗಿ ಕರ್ಣೇಯ್ಯನ ಲಕ್ಷ್ಮಣನವರು ವಂದಿಸಿದರು.

ವರದಿ : ಕರ್ಣೇಯ್ಯನ ಲಕ್ಷ್ಮಣ.

## ಹೊಯ್ಯ ಮತ್ತು ಸುವ್ವಿ

ದಕ್ಷಿಣ ಕನ್ನಡ ಮತ್ತು ಕೊಡಗು ಅರೆಭಾಷಿಕ ಗೌಡ ಜನಾಂಗದಲ್ಲಿ ಪ್ರಚಲಿತವಿರುವ ಹಾಗೂ ಬಹು ಹಿಂದೆ ನಾಟಿಗದ್ದೆ/ ಕಂಬಳಗಳಲ್ಲಿ ಮತ್ತುಕೂಡು ಕುಟುಂಬಸಮಾರಂಭಗಳಲ್ಲಿ ಹಾಡುತ್ತಿದ್ದ ಹೊ-ಹೊಯ್ಯಾ, ಹೊಯ್ ಮತ್ತು ಅಗೆ ಏಕಲುಗಳಲ್ಲಿ ಸುವ್ವಿ ಸುವ್ವಿ, ದುಂಬಿ ದುಂಬಿ ಹಾಡುಗಳನ್ನು ಮುಂದಿನ ಯುವ ಪೀಳಿಗೆಯ ಹಿತದೃಷಿಗಾಗಿ ತಿಳಿದಿರುವ ಓದುಗರು ಸಂಗ್ರಹಿಸಿ ಸಂಗಾತಿಗೆ ಕಳುಹಿಸಿ ಕೊಡುವಂತೆ ಈ ಮೂಲಕ ಕೋರಲಾಗಿದೆ.

ನಾಟಿಗದ್ದೆಗಳಲ್ಲಿ ಗಣೋಧಿ ಇಡುವ ಕ್ರಮ, ಅದಕ್ಕಿರುವ ಕತೆಗಳನ್ನು ಓಟುಗದ್ದೆಯಲ್ಲಿ ಐದು/ಮೂರು ಬೆತ್ ಕುತ್ತುವ ಕ್ರಮ, ಕಾವೇರಿ ಸಂಕ್ರಮಣದಂದು ಗದ್ದೆಯಲ್ಲಿ ಹಿಟ್ಟು ಇಡುವ ಕ್ರಮದ ವಿವರಣೆ, ಕಿಡ್ಡಾಸದಲ್ಲಿ ಭೂಮಿ ತಾಯಿಯ ಸೂತಕದ ಕಥೆ, ನಾಗದೇವತೆಗಳ ಪೂಜಿಸುವ ಕ್ರಮ, ಭೂಮಿ ಗುಳಿಗನನ್ನು ಪಾಲಿಸುವಿಕೆ, ಚಂಡಿಚಾಮುಂಡಿಯರ, ಮಾರಿಯಮ್ಮನಿಗೆ ಕೊಡುವ ಕ್ರಮಗಳು, ರಣ ಭೂತ ಪ್ರೇತಗಳ ಕಥೆಗಳು, ಅಜ್ಜಿ ಕುಟ್ಟಿ ಪಾಶಾಣ ಮೂರ್ತಿಯ ಕೋಲ, ಕೆಂಚಿರಾಯನ ಚರಿತ್ರೆ, ಹರಿಯ ಸೇವೆ (ಹರ್ಸೇವೆ) ನರಿ ಪೂದದ ಕಥೆ, ಕಾರ್ತಿಂಗಳಲ್ಲಿ ದೆವ್ವಗಳಿಗೆ ಕೊಡುವ ಪದ್ಧತಿ ಹದಿನಾರರ ಕೋಲೆಗಳಿಗೆ ಸೇರಿಸುವಕ್ರಮಗಳ ಪಾಲನೆ ಇತ್ಯಾದಿಗಳ ಬಗ್ಗೆ ಒಂದು ಪುಟಗಳಿಗೆ ಮೀರದಂತೆ, ವಿಶ್ಲೇಷಣೆಯ ಲೇಖನಗಳನ್ನು ಕಳುಹಿಸಿ. ಅವುಗಳಲ್ಲಿ ಉತ್ತಮವಾದವುಗಳನ್ನು ಖಂಡಿತ ಪ್ರಕಟಿಸುತ್ತೇವೆ. ಈ ಎಲ್ಲಾ ಲೇಖನಗಳು ಅರೆಭಾಷೆಯಲ್ಲಿಯೇ ಇರಲಿ. ಹಿರಿಯರಿಂದ ಕೇಳಿ ತಿಳಿದು ಬರೆದು ಕಳುಹಿಸಲು ಮರೆಯದಿರಿ.

ಸಂಪಾದಕ

## ಪ್ರಶಂಸೆ

ಈಗೀಗ ನಿಮ್ಮ ನಲಿವು ನೋವಿನೊಡನೆ ನಮ್ಮ ಪತ್ರಿಕೆ ಕೊಡಗು ಸಂಗಾತಿ ಅತ್ಯಾಕರ್ಷವಾಗಿ ಮೂಡಿಬರುತ್ತಿದೆ. ನಮ್ಮ ಸಮಾಜವನ್ನು, ಜನರನ್ನು, ಜನರ ಸಂಸ್ಕೃತಿ ಸಂಪ್ರದಾಯಗಳನ್ನು ಆಕರ್ಷಕ ರೀತಿಯಲ್ಲಿ ಪ್ರಕಟಿಸುತ್ತಿರುವಿರಿ. ಧನ್ಯವಾದಗಳು ಕುಲದೇವ್ರು ನಿಮ್ಮನ್ನು ಹರಸಲಿ.

ಕೊಡಗು ಸಂಗಾತಿ ಸಂಚಿಕೆ 12ರ ಪಾಕ್ಷಿಕ ಪತ್ರಿಕೆಯಲ್ಲಿ ಪುಟ 3 ಹತ್ತು ಕುಟುಂಬ ಹದಿನೆಂಟು ಗೋತ್ರದ ವಿಷಯ ಪ್ರಸ್ತಾಪಿಸಿದ್ದೀರಿ, ಸಂತೋಷ ಇದರಿಂದ ನನಗೆ ಕೆಲವು ಮಾಹಿತಿ ಸಿಕ್ಕಿದವು. ಆದರೆ ಪೂರ್ಣ ಪ್ರಮಾಣ ಸಿಗಲಿಲ್ಲ. ಇದರ ಬಗ್ಗೆ ಆಳವಾದ ತಿಳುವಳಿಕೆ ಅಗತ್ಯ.

ನಂಗಾರು ಪೊನ್ನಪ್ಪ ದಯಾನಂದ, ಶ್ರೀ ನಿಡ್ಯಮಲೆ ಅಪ್ಪಯ್ಯ ಮಾಧವ, ಆಗಸ್ಟ್‌ನಲ್ಲಿ ಮೂಡಿ ಬಂದ ಡ್ರಾಸ್, ಕಾರ್ಗಿಲ್ ವೀರಮಣಿಗಳ ವಿಷಯವಂತೂ ಎದೆಯಾಳಕ್ಕೆ ಮುಟ್ಟಿತು. ಆಗಸ್ಟ್‌ನಲ್ಲಿ ಮೂಡಿ ಬಂದ ಭಗಂಡೇಶ್ವರ ದೇವಸ್ಥಾನ, ಸ್ನಾನ ಘಟ್ಟ, ಆಲದ ಕಟ್ಟೆಗಳಂತೂ ನಮ್ಮನ್ನು ಭಾಗಮಂಡಲಕ್ಕೆ ಕೊಂಡೊಯ್ಯಿತು. ಇಂತ ಆಕರ್ಷಣೀಯ, ಸಾಹಿತಿಯ, ಪರಂಪರೆಯ ಲೇಖನಗಳು ನಮ್ಮ ಕೊಡಗು ಸಂಗಾತಿಯಲ್ಲಿ ಸದಾ ಶೋಭಿಸಲಿ, ನಿಮಗೆ ನನ್ನ ಅನಂತ ಧನ್ಯವಾದಗಳು.

ಚೇಂದ್ರಿಮಾಡ ಮುತ್ತಪ್ಪ, ಕುಶಾಲನಗರ

K. R. N. N. - 240

10-01-96 TCI Kar. 09592

## ಜೀವಾವಧಿ ಸದಸ್ಯತನ ಕೊಟ್ಟೊಳೊ



ಡಾ. ಪ್ರವೀಣ ಎಸ್. ಎಸ್.
M.B.B.S., M.D. (OBG), D.N.B.

ಡಾ. ಪ್ರವೀಣನವು ಮದೆನಾಡಿನ ನೆರಿಯನ ಸೋಮಯ್ಯ ಮತ್ತೆ ಸರಸ್ವತಿಯವರ ಮಂಜನಾಗಿ ಕೇರಳಲಿ ಡಾಕ್ಟರಾಗಿ ಒಳೋ. ಇವ್ರ ಅಂಣ ನವೀನ ಮತ್ತೆ ಅತ್ತಿಗೆ ರಾಜೇಶ್ವರಿ ಸಹ ವೈದ್ಯಕೀಯ ರಂಗಲಿ ಡಾಕ್ಟರ್‌ಗಳಾಗಿಸೇವೆಸಲ್ಲಿಸ್‌ತ ಒಳೊ. ಒಂದೆ ಮನೇಲಿ ಮೂರು ಡಾಕ್ಟರ್‌ಗಳ್ನ ಹೊಂದಿದ ಕೀರ್ತಿ ಇವರದ್. ಇವ್ ನಮ್ಮ ಸಂಗಾತಿಗೆ ಆರೋಗ್ಯ ಚಿಂತನ ವಿಷಯಲಿ ಲೇಖನ ಬರ್ದ್ ಈಗಾಗಲೇ ಲಾಯ್ಕ ಪರಿಚಯ ಆಗ್ಯೊಳೋ. ಇವ್ರ ಅಪೂರ್ವ ಪರಿಚಯನ ಸಂಗಾತಿಯ ಸಂಪುಟ 3, ಸಂಚಿಕೆ 16, ಆಗಸ್ಟ್ 16-31ರ ತನಕದ ಪಾಕ್ಷಿಕಲಿ ಮಾಡ್ಯೊಳೋ. ಹಂಗೆನೆ ಪತ್ರಿಕೆ ಬೆಳೆಯುವ ಉದ್ದೇಶದಿಂದ ಜೀವಾವಧಿ ಸದಸ್ಯತನ ಕೊಟ್ಟು ಸಹಕರಿಸೊಳೋ. ಜೀವನಲಿ ಗೃಹಸ್ತನಾಕೆ ಹೊರಟ ಇವುಕೆ ಒಳ್ಳ ಕಡೆಂದ ಸಮ್ಮಂದ ಸಿಕ್ಕಿ ತಮ್ಮ ಜೀವನಲಿ ಮಹತ್ತರ ಸಾಧನೆನ ಮಾಡಲಿತ್ತೇಳಿ ಕುಲದೇವ್ರು ವೆಂಕಟರಮಣನ ಸಂಗಾತಿ ಬೇಡಿಕಂಡದೆ.

**ಸಂಪಾದಕಿ**

---

## ಕೊಡಗು ಗೌಡ ವಿದ್ಯಾರ್ಥಿ ವೇತನ ನಿಧಿ ಸಂಗ್ರಹಕ್ಕಾಗಿ ಗೌಡ ಬಾಂಧವರಲ್ಲಿ ಮನವಿ :

**(ಕೊಡಗು ಗೌಡ ವಿದ್ಯಾಸಂಘ (ರಿ) ಮಡಿಕೇರಿ, ಗುಡ್ಡೆಮನೆ ಅಪ್ಪಯ್ಯಗೌಡ ರಸ್ತೆ, ಮಡಿಕೇರಿ)**

ಕೊಡಗು ಗೌಡ ವಿದ್ಯಾ ಸಂಘವು ಗೌಡ ಜನಾಂಗದ ಪ್ರತಿಭಾವಂತ ಮತ್ತು ಬಡವಿದ್ಯಾರ್ಥಿಗಳನ್ನು ವಿದ್ಯಾರ್ಜನೆಗೆ ಪ್ರೋತ್ಸಾಹಿಸುವಲ್ಲಿ ವಿದ್ಯಾರ್ಥಿವೇತನ ನಿಧಿಯನ್ನು ಸ್ಥಾಪಿಸಿರುವುದು ಸರಿಯಷ್ಟೆ. ಸದ್ರಿ ನಿಧಿಯು ಖಾಯಂ ಮತ್ತು ಶಾಶ್ವತವಾಗಿ ನಡೆದು ಬಂದು ಅದರಿಂದ ಬರುವ ಬಡ್ಡಿಯಿಂದ ಮಾತ್ರ ಪ್ರತಿ ವರ್ಷ ದಾನಿಗಳ ಹೆಸರಿನಲ್ಲಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಕೊಡಲಾಗುತ್ತಿದೆ. 1977ರಲ್ಲಿ ದಿ. ಪಟ್ಟಡ ನೀಲವ್ವ ಮುತ್ತಣ್ಣ ಸ್ಮಾರಕ ವಿದ್ಯಾರ್ಥಿವೇತನ ನಿಧಿಯಿಂದ ಪ್ರಾರಂಭವಾಗಿ ಇಂದು ಸುಮಾರು 104 ದಾನಿಗಳಿಂದ ಸಂಗ್ರಹಿಸಿದ ಮೊತ್ತವು ಈಗಾಗಲೇ ರೂ. 1,77, 338/-ಗಳನ್ನು ದಾಟಿದೆ. ಸಂಘದ ಈ ಮೇಲ್ಕಂಡ ನಿಧಿಯ ಗುರಿಯು ಸುಮಾರು 10 ಲಕ್ಷಕ್ಕೆ. ಮೇಲ್ಪಟ್ಟು ಇರುವುದರಿಂದ ಅರೆಭಾಷಿಕ ಜನಾಂಗದ ಹತ್ತು ಕುಟುಂಬ ಹದಿನೆಂಟು ಗೋತ್ರದ ವ್ಯಾಪ್ತಿಗೆ ಒಳಪಡುವ ಸರ್ವ ಕೊಡುಗೈ ಮಹಾದಾನಿಗಳಿಂದ ನಿಧಿಯನ್ನು ವೃದ್ಧಿಸುವತ್ತ ಮನವಿಯನ್ನು ಮಾಡಲಾಗಿದೆ. ದೇಶ, ವಿದೇಶದ ನಾನಾ ಭಾಗಗಳಲ್ಲಿ ವಾಸಿಸುವ ಜನಾಂಗದ ಹಿತೈಷಿಗಳು ಉದಾರ ಮನಸ್ಸಿನಿಂದ ತಮ್ಮ ತನು-ಮನ-ಧನವನ್ನು ನೀಡಿ ಸಹಕರಿಸುವುದು. ದಾನಿಗಳು ಕನಿಷ್ಟ ರೂ 1000/-ಕ್ಕಿಂತಲೂ ಮತ್ತು ಹೆಚ್ಚಿನ ಮೊತ್ತವನ್ನು ನೀಡಬಹುದು. ಅಂತಹವರ ಹೆಸರನ್ನು ದಾನಿಗಳ ಪಟ್ಟಿಯಲ್ಲಿ ಸೇರಿಸುವುದಲ್ಲದೆ ಆಗಿಂದಾಗೆ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯಲ್ಲಿ ಪ್ರಕಟ ಪಡಿಸಲಾಗುವುದು. ಜನಾಂಗದ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಹೆಕ್ಕಿ IAS, IPS. ಅಧಿಕಾರಿಗಳನ್ನು ಘುಟ್ಟು ಹಾಕುವ ದಿಸಯಲ್ಲೂ ಹಾಗೂ ಅರೆಭಾಷೆ ಮತ್ತು ಸಂಸ್ಕೃತಿ, ಸಂಪ್ರದಾಯಗಳ ಬಗ್ಗೆ ಸಂಶೋಧನೆ ಮಾಡುವ ವಿದ್ಯಾರ್ಥಿಗಳಿಗೂ ಧನ ಸಹಾಯ ಮಾಡುವ ಇರಾದೆಯು ಸಹ ಈ ಸಂಘದ ಗುರಿಯಾಗಿದೆ.

**ವಿದ್ಯೆಯೇ ಅದಿ ದೇವತೆ, ಜನಾಂಗದ ಐಕ್ಯತೆಯೇ ದೇಶದ ಪ್ರಗತಿ, ಸಂಘಟನೆಯೇ ನಮ್ಮ ಧ್ಯೇಯ.**

D.D./Cheque ಕಳುಹಿಸುವ ವಿಳಾಸ :

ಅಧ್ಯಕ್ಷರು, ಕೊಡಗು ಗೌಡ ವಿದ್ಯಾಸಂಘ (ರಿ.), ಗುಡ್ಡೆಮನೆ ಅಪ್ಪಯ್ಯ ಗೌಡ ರಸ್ತೆ,
ಮಡಿಕೇರಿ, ಕೊಡಗು ಜಿಲ್ಲೆ - 571 201 ದೂರವಾಣಿ : 08272/29906

**ಸ್ಥಳ ದಾನ : ಕೊಡಗು ಸಂಗಾತಿ ಸಂಸ್ಥೆ, ಮೈಸೂರು**

---

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.